# ತಬಲಾ ಕ್ಷೇತ್ರಕ್ಕೆ ಪಂಡಿತ ಬಸವರಾಜ ಬೆಂಡಿಗೇರಿಯವರ ಕೊಡುಗೆ

(ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಮಹಾಪ್ರಬಂಧ)


ಸಂಶೋಧಕ

**ರವಿಕಿರಣ ನಾಕೋಡ**

ಮಾರ್ಗದರ್ಶಕರು

**ಡಾ. ಹನುಮಣ್ಣನಾಯಕ ದೊರೆ**

ಡೀನ್, ಲಲಿತಕಲಾ ನಿಕಾಯ

ಮುಖ್ಯಸ್ಥರು, ಸಂಗೀತ ಮತ್ತು ನೃತ್ಯ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ- ೫೮೩ ೨೭೬



ಸಂಗೀತ ಮತ್ತು ನೃತ್ಯ ವಿಭಾಗ

ಲಲಿತಕಲಾ ನಿಕಾಯ

**ಕನ್ನಡ ವಿಶ್ವವಿದ್ಯಾಲಯ, ಹಂಪಿ**

ವಿದ್ಯಾರಣ್ಯ - ೫೮೩ ೨೭೬

**೨೦೦೬**

# ತಬಲಾ ಕ್ಷೇತ್ರಕ್ಕೆ ಪಂಡಿತ ಬಸವರಾಜ ಬೆಂಡಿಗೇರಿಯವರ ಕೊಡುಗೆ

(ಪಿಎಚ್.ಡಿ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಮಹಾಪ್ರಬಂಧ)


ಸಂಶೋಧಕ

**ರವಿಕಿರಣ ನಾಕೋಡ**





ಮಾರ್ಗದರ್ಶಕರು

**ಡಾ. ಹನುಮಣ್ಣನಾಯಕ ದೊರೆ**

ಡೀನ್, ಲಲಿತಕಲಾ ನಿಕಾಯ
ಮುಖ್ಯಸ್ಥರು, ಸಂಗೀತ ಮತ್ತು ನೃತ್ಯ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩೨೭೬



ಸಂಗೀತ ಮತ್ತು ನೃತ್ಯ ವಿಭಾಗ

ಲಲಿತಕಲಾ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩೨೭೬

೨೦೦೬

# ದೃಢೀಕರಣ ಪತ್ರ

ರವಿಕಿರಣ ನಾಕೋಡ ಇವರು "ತಬಲಾ ಕ್ಷೇತ್ರಕ್ಕೆ ಪಂಡಿತ ಬಸವರಾಜ ಬೆಂಡಿಗೇರಿಯವರ ಕೊಡುಗೆ" ಎಂಬ ಶೀರ್ಷಿಕೆಯ ಈ ಮಹಾಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಕನ್ನಡ ವಿಶ್ವವಿದ್ಯಾಲಯದ ಲಲಿತಕಲಾ ನಿಕಾಯದ ಸಂಗೀತ ಮತ್ತು ನೃತ್ಯ ವಿಭಾಗಕ್ಕೆ ಪಿಎಚ್.ಡಿ. ಪದವಿಗಾಗಿ ಸಲ್ಲಿಸುತ್ತಿರುವ ಪ್ರಸ್ತುತ ಮಹಾ ಪ್ರಬಂಧವನ್ನು ಈ ಮೊದಲು ಇವರು ಯಾವುದೇ ಪದವಿಗಾಗಿ ಸಲ್ಲಿಸಿರುವದಿಲ್ಲವೆಂದು ದೃಢೀಕರಿಸುತ್ತೇನೆ.

ಸ್ಥಳ - ವಿದ್ಯಾರಣ್ಯ

ದಿನಾಂಕ : ೧೮.೨.೨೦೦೮

೧೮.೨.೨೦೦೮

**ಡಾ. ಹನುಮಣ್ಣ ನಾಯಕ ದೊರೆ,**
ಡೀನ್, ಲಲಿತಕಲಾ ನಿಕಾಯ
ಮುಖ್ಯಸ್ಥರು, ಸಂಗೀತ ಮತ್ತು ನೃತ್ಯ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩೨೭೬

# ಪ್ರಮಾಣ ಪತ್ರ

"ತಬಲಾ ಕ್ಷೇತ್ರಕ್ಕೆ ಪಂಡಿತ ಬಸವರಾಜ ಬೆಂಡಿಗೇರಿಯವರ ಕೊಡುಗೆ" ಎಂಬ ಶೀರ್ಷಿಕೆಯ ಈ ಮಹಾ ಪ್ರಬಂಧವನ್ನು ಪಿಎಚ್.ಡಿ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಡಾ. ಹನುಮಣ್ಣ ನಾಯಕ ದೊರೆ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಲಲಿತಕಲಾ ನಿಕಾಯದ ಸಂಗೀತ ಮತ್ತು ನೃತ್ಯ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಈ ಮಹಾಪ್ರಬಂಧವು ಮೂಲರೂಪದ ಸಂಶೋಧನಾ ಕೃತಿಯಾಗಿದ್ದು ಈ ಮೊದಲು ಯಾವದೇ ಪದವಿಗಾಗಿ ನಾನು ಯಾವದೇ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿರುವದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ

ಸಂಶೋಧಕ,

ರವಿಕಿರಣ ನಾಕೋಡ

ದಿನಾಂಕ:

# ಪರಿವಿಡಿ



ಪಂ. ಬಸವರಾಜ ಬೆಂಡಿಗೇರಿ

# ಪ್ರಸ್ತಾವನೆ

ಕಲಾ ಪ್ರಪಂಚದಲ್ಲಿ ಗೀತ, ವಾದ್ಯ, ನೃತ್ಯ ಈ ಮೂರು ವಿಷಯಗಳು ಪ್ರಾಮುಖ್ಯತೆ ಹೊಂದಿವೆ. ಈ ಮೂರು ಕಲೆಗಳಿಗೆ ಅವಶ್ಯಕವಾದದ್ದು ತಾಳ ಅಥವಾ ಲಯ. ಲಯವೆಂಬುದು ವಿಶ್ವವ್ಯಾಪಿ ಯಾಗಿದೆ. ಗ್ರಹ ನಕ್ಷತ್ರಗಳ ಪರಿಭ್ರಮಣದಲ್ಲೂ ಲಯವಿದೆ. ಜೀವಿಗಳ ಹೃದಯ ಸ್ಪಂದನದಲ್ಲಿಯೂ ಲಯವಿದೆ. ಹಾಗೆಯೇ ಗಾಯನಕಾರರಿಗೂ ಮತ್ತು ವಾದ್ಯ ಕಲಾವಿದರಿಗೂ ಲಯವು ಮಹತ್ವದ್ದಾಗಿದ್ದು ಈ ಲಯದ ಸಾಥ ನೀಡುವ ವಾದ್ಯವೆಂದರೆ ತಬಲಾ. ಆದ್ದರಿಂದ ತಬಲಾ ವಾದ್ಯಕ್ಕೆ ಹಿಂದೂಸ್ತಾನಿ ಸಂಗೀತ ಕ್ಷೇತ್ರದಲ್ಲಿ ವಿಶಿಷ್ಟ ಸ್ಥಾನವಿದೆ. ತಬಲಾವಾದನದಲ್ಲಿ ಆರು ಘರಾಣೆಗಳಿದ್ದು, ಪ್ರಸ್ತುತ ಸಂಶೋಧನ ಪ್ರಬಂಧದಲ್ಲಿ ಕೇಂದ್ರಬಿಂದುವಾಗಿದ್ದ ತಬಲಾ ಕಲಾವಿದ ಪಂ. ಬಸವರಾಜ ಬೆಂಡಿಗೇರಿಯವರು ಈ ಎಲ್ಲ ಘರಾಣೇಗಳ ಶೈಲಿಯನ್ನು ಹಸ್ತಗತ ಮಾಡಿಕೊಂಡಿದ್ದರಲ್ಲದೆ. ದಿಲ್ಲಿ, ಅಜರಡಾ, ಪೂರಬ ಶೈಲಿಗಳ ವಾದನದಲ್ಲಿ ಹೆಚ್ಚಿನ ಪ್ರಾವೀಣ್ಯತೆ ಹೊಂದಿದವರಾಗಿದ್ದರು.

ಸಂಶೋಧನ ಪ್ರಬಂಧಗಳು ಸರಿಯಾದ ಮಾರ್ಗದಲ್ಲಿ ಸಂಶೋಧಿಸುತ್ತ ಹಲವು ಮಹಾಗ್ರಂಥಗಳಿಗೆ ಸೂಕ್ಷ್ಮ ಹಾಗೂ ಗೌಪ್ಯವಾದ ಅನೇಕ ವಿಷಯಗಳನ್ನು ಪೂರೈಸಿ ಆ ಮಹಾಗ್ರಂಥಗಳ ಯಶಸ್ಸಿಗೆ ಕಾರಣವಾಗಿವೆ. ಪ್ರಸ್ತುತ ಪ್ರಬಂಧದ ಕೇಂದ್ರ ಬಿಂದು ಹಾಗೂ ಒಬ್ಬ ಉತ್ತಮ ಕಲಾವಿದರಾದ ಪಂ ಬಸವರಾಜ ಬೆಂಡಿಗೇರಿಯವರು ಬಹುಮುಖ ಪ್ರತಿಭೆಯಿಂದ ತಬಲಾವಾದನ ಕಲಾಕ್ಷೇತ್ರಕ್ಕೆ ತಮ್ಮದೇ ಆದ ವಿಶಿಷ್ಟ ಕೊಡುಗೆ ಇತ್ತು ಖ್ಯಾತಿ ಪಡೆದವರು. ಇವರ ಜೀವನ ಚರಿತ್ರೆ, ಇವರು ತಬಲಾವಾದನ ಕ್ಷೇತ್ರದಲ್ಲಿ ಗೈದ ಸಾಧನೆ, ಅಲ್ಲದೆ ತಬಲಾ ಘರಾಣೆಗಳ ಪರಿಚಯ, ಕರ್ನಾಟಕದಲ್ಲಿ ಸಂಗೀತ ಹಾಗೂ ತಬಲಾ ಪರಿಸರ ಬೆಳವಣಿಗೆಗಳ ವಿಷಯಗಳನ್ನು ಈ ಪ್ರಬಂಧದಲ್ಲಿ ಅಳವಡಿಸಲಾಗಿದೆ. ಭಾರತೀಯ ಸಂಗೀತ ಶಾಸ್ತ್ರದ ಪ್ರಕಾರ ವಾದ್ಯಗಳ ವರ್ಗೀಕರಣವು ಹೀಗಿದೆ ತಂತುವಾದ್ಯ (ತಂತಿಗಳಿಂದಾದುದು), ಸುಷಿರ ವಾದ್ಯ (ಗಾಳಿಯದು) ಅವನದ್ಧ (ಚರ್ಮದಿಂದಾದದ್ದು) ಮತ್ತು ಘನವಾದ್ಯ (ಧಾತುಗಳಿಂದಾದುದು). ತಬಲಾ ಇದು ಅವನದ್ಧ ಗುಂಪಿಗೆ ಸೇರಿದ ವಾದ್ಯ.

ಪ್ರಾರಂಭದಿಂದಲೂ ಗಾಯನ ಕಲೆಯ ಜೊತೆಗೆ ವಾದನ ಕಲೆಯು ಕೂಡ ಬೆಳೆದು ಬಂದಿದೆ. ಮೊಟ್ಟ ಮೊದಲು ದ್ರುಪದ ಸಂಗೀತಕ್ಕೆ ಪಖವಾಜದ ಬಳಕೆಯಾಗುತ್ತಿತ್ತು. ಆದರೆ ಮುಂದೆ ಖ್ಯಾಲ ಸಂಗೀತಕ್ಕೆ ಬೇರೆ ಚರ್ಮವಾದ್ಯದ ಅವಶ್ಯಕತೆ ತೋರಿತು, ಕಾಲ ಗತಿಸಿದಂತೆ ಪಖವಾಜ ವಾದ್ಯವು ಪರಿವರ್ತನೆಗೊಂಡು ತಬಲಾ ಆಯಿತು. ತಬಲಾ ವಾದ್ಯವು ಹಿಂದುಸ್ತಾನಿ ಸಂಗೀತಕಾರರಿಗೇ ಆಗಲಿ, ವಾದ್ಯ ಸಂಗೀತಕಾರರಿಗೇ ಆಗಲಿ ಪಕ್ಕ ವಾದ್ಯವಾಗಿ ಹಾಗೂ

ಸ್ವತಂತ್ರವಾದನ ನುಡಿಸಲೂ ಸಹ ಬರುವ ಜನಪ್ರಿಯ ವಾದ್ಯವಾಗಿ ಬೆಳೆದು ಬಂದಿದೆ, ಇಂತಹ ಜನಪ್ರಿಯ ತಬಲಾವಾದನ ಕಲೆಯ ಸಾಧನೆಯಲ್ಲಿ ಪ್ರಾವೀಣ್ಯತೆ ಹೊಂದಿ, ಕನ್ನಡ ನಾಡಿನ ಖ್ಯಾತಿಯನ್ನು ದೇಶಾದ್ಯಂತ ಮೆರೆಸಿದ ಕಲಾವಿದರಲ್ಲಿ ಪಂ.ಬಸವರಾಜ ಬೆಂಡಿಗೇರಿಯವರು ಗಣ್ಯರು. ಪಂ. ಬಸವರಾಜ ಬೆಂಡಿಗೇರಿಯವರು ಜೀವನಾದ್ಯಂತ ತಬಲಾದಲ್ಲಿ ಮಾಡಿದ ಸಾಧನೆ ಈ ಪ್ರಬಂಧದಲ್ಲಿದೆ. ಇವರ ತಬಲಾವಾದನ ಕಲಾ ಪ್ರೌಢಿಮೆಗೆ ಉಸ್ತಾದ ಹಲೀಮ ಜಾಫರಖಾನ, ಉಸ್ತಾದ ಬಡೇ ಗುಲಾಮ ಅಲಿಖಾನ, ಪಂಡಿತ ಗಜಾನನ ಬುವಾ ಜೋಶಿ, ಶ್ರೀಮತಿ ಕಂಕಣಾ ಬ್ಯಾನರ್ಜಿ, ಪಂಡಿತ ಪ್ರತಾಪ ನಾರಾಯಣ, ಉಸ್ತಾದ ಅಲ್ಲಾರಖಾ, ಉಸ್ತಾದ ಶಮಶುದ್ದೀನ ಖಾನ, ವಿದುಷಿ ಸಿದ್ಧೇಶ್ವರಿ ದೇವಿ ಮುಂತಾದ ಮೇಧಾವಿಗಳು ಮೆಚ್ಚುಗೆ ತೋರಿದ್ದಾರೆ. ಇಂತಹ ಶ್ರೇಷ್ಠ ಕಲಾವಿದರ ಬಗ್ಗೆ ವಿಶದವಾಗಿ ಒಂದೇ ಕೃತಿಯಲ್ಲಿ ಅವರ ತಬಲಾ ಕಲಾ ಸಾಧನೆ, ಕಾರ್ಯಕ್ರಮಗಳ ವಿವರ, ಶಿಷ್ಯ-ವೃಂದದ ಬಗ್ಗೆ ಗುರು-ಪರಂಪರೆಯ ಬಗ್ಗೆ ವಿವರಿಸುವದರ ಜೊತೆಗೆ ಹಿಂದುಸ್ತಾನಿ ಪರಿಸರ ಕರ್ನಾಟಕದಲ್ಲಿ ಬೆಳೆದು ಬಂದ ರೀತಿ ಹಾಗೂ ಕರ್ನಾಟಕದಲ್ಲಿ ಹಿಂದುಸ್ತಾನಿ ಸಂಗೀತ ಬೆಳೆಯಲು ಶ್ರಮಿಸಿದ ಹಲವಾರು ಅಗ್ರ ಗಣ್ಯರ ಹಾಗೂ ಇಲ್ಲಿಯ ಸಂಗೀತಗಾರರ ಮತ್ತು ಅವರ ಶಿಷ್ಯರ ಪರಿಚಯವನ್ನು ಈ ಪ್ರಬಂಧದಲ್ಲಿ ಕೊಡಲಾಗಿದೆ.

ತಬಲಾ ಉತ್ಪತ್ತಿ ಉತ್ತರ ಹಿಂದುಸ್ತಾನದ ತಬಲಾ ಘರಾಣೆಗಳು, ಉತ್ತರದಿಂದ ಕರ್ನಾಟಕದಲ್ಲಿ ತಬಲಾ ಪರಿಸರ ಬೆಳೆದು ಬಂದ ರೀತಿ ಅಲ್ಲದೇ ಕರ್ನಾಟಕದಲ್ಲಿ ಹೆಸರಾದ ತಬಲಾ ವಾದನಕಾರರ ಪರಿಚಯವನ್ನು ವಿವರಿಸುವ ನನ್ನ ಉದ್ದೇಶಕ್ಕೆ ಪ್ರಸ್ತುತ ಪ್ರಬಂಧವಾದ "ತಬಲಾ ಕ್ಷೇತ್ರಕ್ಕೆ ಪಂಡಿತ ಬಸವರಾಜ ಬೆಂಡಿಗೇರಿಯವರ ಕೊಡುಗೆ" ಇದು ಇಂಬುಗೊಟ್ಟಿದೆ.

ಸಾಂಸ್ಕೃತಿಕ ಹಾಗೂ ಐತಿಹಾಸಿಕ ಪ್ರಸಿದ್ಧ ಸ್ಥಳವಾದ ಹಂಪಿಯಲ್ಲಿ ಎಲ್ಲ ಕಲೆಗಳ ಅಧ್ಯಯನಕ್ಕೆ ಪ್ರೋತ್ಸಾಹನಕಾರಿಯಾದ ಇಲ್ಲಿಯ ಕನ್ನಡ ವಿಶ್ವವಿದ್ಯಾಲಯವನ್ನು ನನ್ನ ಈ ಪ್ರಬಂಧ ಮಂಡಿಸುವದಕ್ಕಾಗಿ ಆಯ್ದು ಕೊಂಡೆನು. ಈ ವಿಷಯದಲ್ಲಿ ಮಾರ್ಗದರ್ಶಿಗಳಾದ ಡಾ.ಹನುಮಣ್ಣಾ ನಾಯಕ ದೊರೆಯವರ ಜೊತೆಗೆ ಚರ್ಚೆಯನ್ನು ಮಾಡಿದಾಗ ಅವರೂ ಸಹ ಸಂತೋಷದಿಂದ ಒಪ್ಪಿಕೊಂಡರು. ಅವರ ಒಪ್ಪಿಗೆ ಹಾಗೂ ಮಾರ್ಗದರ್ಶನ ದೊರೆತದ್ದು ನನ್ನ ಸುದೈವವೆಂದೇ ಭಾವಿಸುವೆ. ನನ್ನ ಈ ಪಿಎಚ್.ಡಿ. ಮಹಾಪ್ರಬಂಧವನ್ನು ಸಂಗೀತ ಮತ್ತು ನೃತ್ಯ ವಿಭಾಗದ ಮುಖ್ಯಸ್ಥರಾದ ಡಾ. ಹನುಮಣ್ಣ ನಾಯಕ ದೊರೆ ಇವರ ಸಹಾನುಭೂತಿಪರ ಮಾರ್ಗದರ್ಶನದಲ್ಲಿ ಹಂಪಿಯ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿದ್ದೇನೆ.

ಅಧ್ಯಾಯ - ೧

# ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ವಿಶ್ವ ಸೀಮಾತೀತವಾದುದು. ಅದರ ಒಡಲಲ್ಲಿ ನಕ್ಷತ್ರಪುಂಜ ಮುಂತಾದವುಗಳು ಚಲಿಸುತ್ತಿವೆ. ಅವುಗಳಂತೆಯೇ ಸೂರ್ಯನೂ ಒಂದು ನಕ್ಷತ್ರೋಪಾದಿಯಲ್ಲಿ ಇದ್ದಾನೆ. ಸೂರ್ಯನ ತಪ್ತಗೋಲದಿಂದ ಹಲವಾರು ಕೆಂಡದುಂಡೆಗಳು ಸಿಡಿದು ಹೊರಗೆ ಬಂದು ಸೂರ್ಯನ ಸುತ್ತಲೂ ಒಂದು ಕಕ್ಷೆಯಲ್ಲಿ ನಿಯಮಿತ ರೀತಿಯಿಂದ ತಿರುಗುತ್ತಿವೆ. ಸೂರ್ಯನಲ್ಲಿರುವ ಗುರುತ್ವಾಕರ್ಷಣ ಶಕ್ತಿಯು, ಸಿಡಿದು ಬಂದ ಕೆಂಡಗಳ ಗತಿಯನ್ನು ನಿಯಂತ್ರಿಸುತ್ತಿದೆ. ಸಿಡಿದು ಬಂದ ಕೆಂಡದುಂಡೆಗಳು ಕಾಲಾಂತರದಲ್ಲಿ ಆರಿ ಘನೀಭವನ ಹೊಂದಿ ಗ್ರಹಗಳು ಉಪಗ್ರಹಗಳು ಆದವು. ಇವುಗಳು ಸೂರ್ಯನ ಸುತ್ತಲೂ ತಿರುಗುತ್ತಿರುವ ಕಕ್ಷೆಯು ನಿರ್ದಿಷ್ಟವಾಗಿದೆ ಮತ್ತು ನಿಯಮಿತತೆಗಳಿಗೆ ಒಳಗೊಂಡಿದೆ. ಗ್ರಹ- ಉಪಗ್ರಹಗಳ ಗತಿ ಲಯ ಬದ್ಧವಾಗಿದೆ. ಗತಿಯಲ್ಲಿ ಲಯವು ಲೋಪವಾದರೆ ಗ್ರಹಗಳು ಒಂದಕ್ಕೊಂದು ತಾಕಲಾಡಿ ಪ್ರಳಯವೇ ಆದೀತು. ಆದರೆ ಕೋಟ್ಯಾಂತರ ವರ್ಷಗಳಿಂದ ನಡೆದು ಬಂದ ಈ ಲಯಬದ್ಧಗತಿಯಲ್ಲಿ ವ್ಯತ್ಯಯ ಉಂಟಾಗುವ ಸಾಧ್ಯತೆ ಇಲ್ಲವೆಂದು ವಿಜ್ಞಾನಿಗಳ ವಿಚಾರ. ಲಯವೆಂಬುದು ವಿಶ್ವದ ನರನಾಡಿಗಳ ಮೂಲವಾಗಿದೆ. ಅಷ್ಟೇ ಅಲ್ಲದೆ ಜೀವಿಗಳ ಹೃದಯದ ಸ್ಪಂದನವೂ ಲಯದಿಂದ ಒಡಗೂಡಿದೆ. ಇದರಿಂದ ಯಾರಿಗಾದರೂ ಲಯದ ಮಹತ್ವ ಅರಿವಾಗದೇ ಇರದು. ಇಂತಹ ಲಯವನ್ನೇ ಕೇಂದ್ರ ಬಿಂದುವಾಗಿ ಇಟ್ಟುಕೊಂಡು ಸಂಗೀತ ಅದರ ಸುತ್ತ ಹೆಣಿಕೆಗೊಂಡಿದೆ. ಸಂಗೀತದಲ್ಲಿ ಲಯವೇ ಮೂಲಾಧಾರ. ಲಯವನ್ನು ಪ್ರಕಟಿಸುವ ಸಂಗೀತದ ವಾದ್ಯಗಳಲ್ಲಿ ತಬಲಾ ಕೂಡ ಒಂದು ವಾದ್ಯವಾಗಿದೆ. ಇಂತಹ ಲಯವಾದ್ಯ ತಬಲಾ ನುಡಿಸುವ ಕಲಾ ಪ್ರಾವೀಣ್ಯತೆಯನ್ನು ಪಡೆದ ಖ್ಯಾತ ಕಲಾವಿದರಲ್ಲಿ ಉಸ್ತಾದ ಅಹಮದ ಜಾನ್-ತಿರಖ್ವಾ, ಉಸ್ತಾದ ಅಮೀರ ಹುಸೇನ ಖಾನ್, ಉಸ್ತಾದ ಅಬೀದ ಹುಸೇನ ಖಾನ, ಉಸ್ತಾದ ಕರಾಮತ್ತುಲ್ಲಾ ಖಾನ, ಉಸ್ತಾದ ಕಾದಿರ ಬಕ್ಷ, ಪಂ. ಸಮತ್ ಪ್ರಸಾದ, ಉಸ್ತಾದ ಮೇಹಬೂಬ ಖಾನ ಸಾಹೇಬ ಮಿರಜಕರ, ಉಸ್ತಾದ ಅಲ್ಲಾ ರಖಾ, ಪಂಡಿತ ಕಿಶನ ಮಹಾರಾಜ, ಉಸ್ತಾದ ಶೇಖ್ ದಾವುದ ಖಾನ, ಪಂಡಿತ ನಾರಾಯಣರಾವ ಇಂದೋರಕರ, ಪಂ.ಶೇಷಗಿರಿ ಹಾನಗಲ್ ಮುಂತಾದವರು ಗಣ್ಯರು. ಈ ಮಹಾನ ಕಲಾಕಾರರಂತೆ ಪಂಡಿತ ಬಸವರಾಜ ಬೆಂಡಿಗೇರಿಯವರು ಪ್ರತಿಭಾವಂತರಾಗಿದ್ದಾರೆ. ಜೀವನಾದ್ಯಂತ ತಬಲಾ ವಾದನ ಕಲೆಯಲ್ಲಿ ಇವರು ಮಾಡಿದ ಸಾಧನೆಗಳನ್ನು ಸಕಲ ಕಲಾಭಿಮಾನಿಗಳಿಗೆ ಹಾಗೂ ವಿದ್ಯಾರ್ಥಿ ವಿದ್ಯಾರ್ಥಿನಿಯರಿಗೆ ವಿಶದವಾಗಿ ತಿಳಿಯಪಡಿಸುವದೇ ಈ ಸಂಶೋಧನಾ ಪ್ರಬಂಧದ ಉದ್ದೇಶವಾಗಿದೆ.

## ವ್ಯಾಪ್ತಿ :

ಸಂಗೀತ ಕ್ಷೇತ್ರಕ್ಕೆ ಬಹುದೊಡ್ಡ ಇತಿಹಾಸವಿರುವದು ಎಲ್ಲರಿಗೂ ತಿಳಿದ ವಿಷಯ. ಸಂಗೀತ ಕ್ಷೇತ್ರದಲ್ಲಿ ಬಹಳ ಪ್ರಖ್ಯಾತ ಕಲಾವಿದರ ಕೊಡುಗೆಯು ಈ ಕ್ಷೇತ್ರದ ಹಿರಿಮೆಯನ್ನು ಹಚ್ಚ ಹಸಿರಾಗಿ ಇರಿಸುವಲ್ಲಿ ಪ್ರಮುಖ ಪಾತ್ರವಹಿಸಿದೆ. ಇಂತಹ ಪ್ರಖ್ಯಾತ ಕಲಾವಿದರಲ್ಲಿ ಪಂಡಿತ ಬಸವರಾಜ ಬೆಂಡಿಗೇರಿಯವರು ಒಬ್ಬರಾಗಿದ್ದು ತಬಲಾವಾದನ ಕಲೆಯಲ್ಲಿ ತಮ್ಮ ಸತತ ಪರಿಶ್ರಮದಿಂದ ಉಚ್ಚ ಶ್ರೇಣಿಯಲ್ಲಿ ಪರಿಗಣಿಸಲ್ಪಟ್ಟಿದ್ದಾರೆ. ಇವರು ತಮ್ಮ ಉನ್ನತ ಕಲಾ ಸಾಧನೆ ಪ್ರದರ್ಶನವನ್ನು ಭಾರತದ ಹಲವಾರು ಮಹಾ ನಗರಗಳಲ್ಲಿ ಕೊಟ್ಟು ಜನರ ಮೆಚ್ಚುಗೆಯನ್ನು ಪಡೆಯುವಲ್ಲಿ ಯಶಸ್ವಿಯಾದರು. ಅಷ್ಟೇ ಅಲ್ಲದೆ ದೇಶದ ಎಲ್ಲಾ ಭಾಗಗಳಲ್ಲಿಯೂ ತಮ್ಮ ಶಿಷ್ಯ ವೃಂದವನ್ನು ಬೆಳೆಸಿ ತಬಲಾ ಸಂಗೀತ ಕ್ಷೇತ್ರಕ್ಕೆ ಮಹತ್ವದ ಕೊಡುಗೆಯನ್ನು ನೀಡಿದ ಹಿರಿಯ ಕಲಾವಿದರು ಇವರು. ಈ ಸಂಶೋಧನಾ ಪ್ರಬಂಧದ ವ್ಯಾಪ್ತಿಯಲ್ಲಿ ಬರುವ ಇನ್ನಿತರ ವಿಷಯಗಳೆಂದರೆ.

೧) ಇವರ ಜೀವನದಲ್ಲಿಯ ಕೌಟುಂಬಿಕ, ಶೈಕ್ಷಣಿಕ, ಕಲಾತ್ಮಕ ಮುಂತಾದ ವಿಷಯಗಳ ವಿವರಣೆ.

೨) ತಬಲಾವಾದನ ಕಲಾ ಕ್ಷೇತ್ರಕ್ಕೆ ಬೆಂಡಿಗೇರಿಯವರ ಹೊಸ ವಿಶೇಷ ರಚನೆಗಳು ಉದಾ: ಪೇಶಕಾರ ಕಾಯದಾ, ರೇಲಾ, ಗತ್ತು, ಚಕ್ರದಾರಗಳು.

೩) ವಿವಿಧ ಶೈಲಿಯ ಗಾಯಕರೊಡನೆ ಹಾಗೂ ತಂತುವಾದ್ಯ ವಾದಕರೊಡನೆ ಸಾಥ-ಸಂಗತ ಮಾಡಿದ ವಿವರಗಳು.

೪) ಎಲ್ಲ ಹಿರಿಯ ಕಲಾವಿದರಿಂದ ಪ್ರಶಂಸೆ ಪ್ರಶಸ್ತಿಗಳನ್ನು ಪಡೆದ ವಿವರಗಳು ಹಾಗು

೫) ಆಕಾಶವಾಣಿಯಲ್ಲಿ ತಬಲಾ ಸೋಲೊ ಸಾಥಿ ಮುಂತಾದ ಕಾರ್ಯಕ್ರಮಗಳನ್ನು ನಡೆಸಿದ ಬಗ್ಗೆ ವಿವರಗಳು.

೬) ಕರ್ನಾಟಕದಲ್ಲಿ ಹಿಂದೂಸ್ತಾನಿ ಸಂಗೀತ ಪರಿಸರ ಹಾಗೂ ಇಲ್ಲಿಯ ಸಂಗೀತಗಾರರ ಪರಿಚಯ.

೭) ತಬಲಾ ಉತ್ಪತ್ತಿ ಹಾಗೂ ಕರ್ನಾಟಕದಲ್ಲಿ ತಬಲಾ ಪರಿಸರ.

೮) ತಬಲಾ ಪರಂಪರೆ ಹಾಗೂ ಘರಾಣೆಯ ಬಗ್ಗೆ ವಿವರಗಳು.

೯) ಗುರು ಪರಂಪರೆ ಹಾಗೂ ಇವರ ಶಿಷ್ಯ ವೃಂದದ ಪರಿಚಯ.

೧೦) ಪಂ. ಬಸವರಾಜ ಬೆಂಡಿಗೇರಿಯವರನ್ನು ಕುರಿತು ಸಂದರ್ಶನಗಳ ಮುಖಾಂತರ ದೊರೆತ ಹಿರಿಯ ಕಲಾವಿದರ ಅಭಿಪ್ರಾಯಗಳು.

ಅಧ್ಯಾಯ - ೨

# (ಅ) ಕರ್ನಾಟಕದಲ್ಲಿ ಹಿಂದೂಸ್ಥಾನಿ ಸಂಗೀತ ಪರಿಸರ

# (ಬ) ತಬಲಾ ಉತ್ಪತ್ತಿ ಹಾಗೂ ಕರ್ನಾಟಕದಲ್ಲಿ ತಬಲಾ ಪರಿಸರ

## ಅಧ್ಯಾಯ-೨

# ಅ. ಕರ್ನಾಟಕದಲ್ಲಿ ಹಿಂದೂಸ್ಥಾನಿ ಸಂಗೀತ ಪರಿಸರ

ಭಾರತದಲ್ಲಿ ಸಂಗೀತ ಪರಂಪೆಯು ಗುಪ್ತರ ಕಾಲದಲ್ಲಿಯೂ ಪ್ರಚಾರದಲ್ಲಿದ್ದು ಗುಪ್ತವಂಶದ ಮಹಾರಾಜರು ಸಂಗೀತದಲ್ಲಿ ಅಭಿರುಚಿ ಹೊಂದಿದವರಾಗಿದ್ದರು.

೧ನೇ ಚಂದ್ರಗುಪ್ತ ಹಿಂದೂ ಸಂಸ್ಕೃತಿಯ ಆರಾಧಕ ಪೋಷಕನಾಗಿದ್ದನು. ಸಂಗೀತವು ಹಿಂದೂ ಧರ್ಮದ ವಿಶೇಷ ಅವಿಭಾಜ್ಯ ಅಂಗವಾಗಿರುವದರಿಂದ ಅದರ ಪ್ರಭಾವ ಇವನ ಮೇಲಾಗಿತ್ತು."ಇವನ ರಾಜ್ಯದಲ್ಲಿ ದತ್ತಿಲ ನೆಂಬ ಸಂಸ್ಕೃತ ಕವಿ ಸಂಗೀತದ ಸ್ವರ, ಜಾತಿ ತಾಲಗಳ ವರ್ಣನೆ ಮಾಡಿರುವನು. ೧ನೇ ಚಂದ್ರಗುಪ್ತನ ಮಗ, ಸಮುದ್ರಗುಪ್ತನು (ಕ್ರಿ.ಪೂ. ೩೮೦ ರಿಂದ ೩೩೦) ೫೦ ವರ್ಷ ರಾಜ್ಯವಾಳಿದ. ಇವನು ಮಹಾನ ತಜ್ಞ, ವೀಣಾವಾದಕ, ಕವಿಗಳಿಗೆ ಉಚ್ಚಮಟ್ಟದ ಸಂಭಾವನೆ ನೀಡಿ ವಿದ್ವಾಂಸರಿಗೆ ಆಶ್ರಯದಾತನಾಗಿದ್ದನು. ಸಂಗೀತ ಕಲೆಗೆ ಸಾಕಷ್ಟು ಪ್ರೋತ್ಸಾಹ ದೊರಕಿಸಿ ಕೊಟ್ಟಿದ್ದನು. ಸಮಯಸಿಕ್ಕಾಗ ವೀಣೆ ನುಡಿಸುತ್ತ ಗಂಟೆ ಗಟ್ಟಕೆ ಕಾಲ ಕಳೆಯುತ್ತಿದ್ದನು. "ಯಾವದೇ ದೇಶದ ಮೇಲೆ ದಂಡೆತ್ತಿ ಹೋಗುವ ಮೊದಲು ಅವನು ವೀಣಾವಾದನ ಮಾಡಿಯೇ ಹೋಗುತ್ತಿದ್ದನೆಂದು ಹೇಳಲಾಗುತ್ತದೆ."[೧]

ಹೀಗೆ ವೀಣೆ ನುಡಿಸುವದರಿಂದ ಸಮುದ್ರಗುಪ್ರನಿಗೆ ಆತ್ಮ ಚೈತನ್ಯ ಸಿಗುತ್ತಿತ್ತಲ್ಲದೆ, ಇದರಿಂದ ಯುದ್ಧ ಕ್ಷೇತ್ರದಲ್ಲಿ ವಿಜಯ ಪ್ರಾಪ್ತವಾಗುತ್ತಿತ್ತು ಎಂದು ಹೇಳಲಾಗಿದೆ. ಇವನ ದರ್ಬಾರಿನಲ್ಲಿ ಅನೇಕ ಶ್ರೇಷ್ಠ ಸಂಗೀತಜ್ಞರು ಹಾಗೂ ನರ್ತಕಿಯರು ಅಶ್ರಯ ಪಡೆದಿದ್ದರು, ಸಮುದ್ರಗುಪ್ತನ ಕಾಲದಲ್ಲಿ ಶಾಸ್ತ್ರೀಯ ಸಂಗೀತದಲ್ಲಿಯೂ ಸಹ ಕೆಲವು ಘಟನೆಗಳಿಂದ ಅದರ ಪ್ರಚಾರ ಚೆನ್ನಾಗಿ ಆಗುತ್ತಿತ್ತು. ಸಂಗೀತದಿಂದ ಮಳೆ ಬೀಳಿಸುವದು, ನೀರಿನಲ್ಲಿ ಬೆಂಕಿ ಹಚ್ಚುವದು ಮುಂತಾದ ಚಮತ್ಕಾರ ಜರುಗಿಸುವ ಶಕ್ತಿಯುಳ್ಳ ಸಂಗೀತಜ್ಞರು ಇವನ ಕಾಲದಲ್ಲಿ ಬಾಳಿದರು ಎಂದು ಹೇಳಲಾಗಿದೆ. ಇವನು ಎಷ್ಟೊಂದು ಸಂಗೀತ ಕಲಾ ಪ್ರೇಮಿಯಾಗಿದ್ದನೆಂದರೆ ಇವನ ಕಾಲದಲ್ಲಿ ಚಲಾವಣೆಗೆ ತಂದ ನಾಣ್ಯಗಳ ಮೇಲೆ ಅವನು ವೀಣೆ ಹಿಡಿದು ಕುಳಿತಿರುವ ಚಿತ್ರವನ್ನು ನೋಡಿ ತಿಳಿದುಕೊಳ್ಳಬಹುದು. ನಂತರ ಸಮುದ್ರಗುಪ್ತನ ಮಗ ಎರಡನೇ ಚಂದ್ರಗುಪ್ತ ಇವನ ಕಾಲದಲ್ಲಿ ಸಂಗೀತ, ಚಿತ್ರಕಲೆ ಕಾವ್ಯ, ಶಿಲ್ಪಕಲೆ, ನೃತ್ಯ ಮುಂತಾದ ಲಲಿತ ಕಲೆಗಳಿಗೆ ಪ್ರೋತ್ಸಾಹ ಸಿಕ್ಕಿತು. ಇವನಿಗೆ "ವಿಕ್ರಮಾದಿತ್ಯ"ನೆಂದೂ ಕರೆಯುತ್ತಿದ್ದರು. ಇವನು ಸಹ ತಂದೆಯಿಂದ ವೀಣೆಯನ್ನು ಕಲಿತು ತಂದೆಯ ಹಾಗೆಯೇ ವೀಣೆಯನ್ನು ನುಡಿಸುತ್ತಿದ್ದನು.

ಕರ್ನಾಟಕದಲ್ಲಿ "ಚಾಲುಕ್ಯ ಮನೆತನದ ಸೋಮೇಶ್ವರನು ಸಂಗೀತ ಕಲೆಯು

---

೧) ಗ್ರಂಥ-ಭಾರತೀಯ ಸಂಗೀತ ಚರಿತ್ರೆ, ಲೇ. ಪ್ರೊ. ಬಿ.ಡಿ. ಪಾಠಕ. ಪು. ಸಂ. ೬೪, ಪ್ರ. ೧೯೭೫

ಬೆಳೆದುಬಂದ ರೀತಿಯನ್ನು ತನ್ನ 'ಮಾನಸೋಲ್ಲಾಸ'ದಲ್ಲಿ ವಿವರಿಸಿದ್ದಾನೆ."[೧] ಅದರಲ್ಲಿ ತತ್ಕಾಲೀನ ಸಂಗೀತ ವಾದ್ಯಗಳ ವರ್ಗೀಕರಣ ಮಾಡಿದ ವಿವರಗಳು ಕಂಡುಬರುತ್ತವೆ. "ಸಂಗೀತದ ಪೂರ್ವಪರ ಪರಂಪರೆಯ ಇತಿಹಾಸವನ್ನು ನೋಡಿದಾಗ ೧೪ನೇ ಮತ್ತು ೧೫ನೇ ಶತಮಾನಗಳ ಕಾಲಾವಧಿಯು, ಹಿಂದೂಸ್ತಾನಿ ಸಂಗೀತದ ಬೆಳವಣಿಗೆಯ ದೃಷ್ಟಿಯಿಂದ ಬಹು ಮಹತ್ವದ ಕಾಲವಾಗಿದೆ."[೨] ಅಲ್ಲಾವುದ್ದೀನ ಖಿಲ್ಜಿಯು ದೇವಗಿರಿಯ ಯಾದವರ ಮೇಲೆ ದಾಳಿ ಮಾಡಲು ತನ್ನ ಆಸ್ಥಾನದ ಸಂಗೀತಗಾರನಾದ ಹಜರತ ಅಮೀರ ಖುಸ್ರೋನನ್ನು ಕಳಿಸಿದ್ದನು. ಆಗ ಅಮೀರ ಖುಸ್ರೋನಿಗೆ ದೇವಗಿರಿಯ ಆಸ್ಥಾನ ಸಂಗೀತಗಾರನಾದ ಗೋಪಾಲ ನಾಯಕನ ಭೇಟಿಯಾಯಿತು. ಅವನ ಸಹಾಯ ಸಹಕಾರಗಳಿಂದ ಈ ಮೊದಲಿನ ಭಾರತೀಯ ಸಂಗೀತ ಪ್ರಣಾಲಿಯನ್ನೇ ಅವನು ಬದಲಾಯಿಸಿದನು. ಇದೇ ಮುಂದೆ ಆಧುನಿಕ ಸಂಗೀತ ಪದ್ಧತಿಯೆಂದು ಪ್ರಸಿದ್ಧವಾಗಿ ಭಾರತಾದ್ಯಂತ ಅತ್ಯಂತ ಜನಪ್ರಿಯ ಸಂಗೀತ ಪ್ರಣಾಲಿಯಾಗಿ ಬೆಳೆದು ಬಂದಿತು. ಮುಂದೆ ೧೬ನೇ ಶತಮಾನದ ಕೊನೆಕೊನೆಗೆ, ಕರ್ನಾಟಕದಲ್ಲಿ ವಿಜಾಪುರದ ಎರಡನೆಯ ಅಲಿ ಆದಿಲಶಹನು ಹಿಂದುಸ್ತಾನಿ ಸಂಗೀತ ಸಂಸ್ಕೃತಿಯ ದೃಷ್ಟಿಯಿಂದ ಬಹು ಮಹತ್ವದ ವ್ಯಕ್ತಿಯಾಗಿದ್ದಾನೆ. ಈತನು ಓರ್ವ ಶ್ರೇಷ್ಠ ದರ್ಜೆಯ ಚಿತ್ರಕಲಾವಿದನಾಗಿರುವ ಜೊತೆಗೆ, ಓರ್ವ ಉದ್ದಾಮ ಸಂಗೀತ ಕಲಾಕೋವಿದನೂ ಆಗಿದ್ದನು. ಈತನು ಹಿಂದುಸ್ತಾನಿ ಶೈಲಿಯಲ್ಲಿ ಅನೇಕ ಧ್ರುಪದ ಧಮಾರಗಳನ್ನು ರಚಿಸಿದ್ದು ಇದು ಆತನ ಕವಿ ಹೃದಯಕ್ಕೆ ಸಾಕ್ಷಿಯಾಗಿದೆ."[೩]

ಕರ್ನಾಟಕದಲ್ಲಿ ಹಿಂದುಸ್ತಾನಿ ಸಂಗೀತದ ಬೆಳವಣಿಗೆಗೆ ಮೈಸೂರಿನ ಅರಸರು ವಿಶೇಷ ರೀತಿಯಲ್ಲಿ ಕಾರಣೀಭೂತರಾಗಿದ್ದಾರೆ. ಮೈಸೂರು ಮಹಾರಾಜರು ವಾರ್ಷಿಕೋತ್ಸವಗಳಲ್ಲಿ ಹಿಂದುಸ್ತಾನಿ ಸಂಗೀತ ಕಲಾವಿದರನ್ನು ಮೈಸೂರಿಗೆ ಆಹ್ವಾನಿಸಿ ಅವರ ಗಾಯನ ಕೇಳಿ ಆನಂದಿಸುತ್ತಿದ್ದರಲ್ಲದೇ ಅವರಿಗೆ ಗೌರವಧನವನ್ನಿತ್ತು ಸನ್ಮಾನಿಸುತ್ತಿದ್ದರು. ನಾಲ್ವಡಿ ಕೃಷ್ಣರಾಜ ಒಡೆಯರ ಇವರ ಕಾಲದಲ್ಲಿ ಉಸ್ತಾದ ಮುರಾದ ಖಾನ (ಬೀನಕಾರ), ಮಹಾಗಾಯಕ ಹಾಫಿಜ ಅಲಿ ಖಾನ, ಬೇಜೋಡ ಸಿತಾರ ವಾದನಕಾರೆಂದು ಖ್ಯಾತಿವೆತ್ತ ಬರಖಾತುಲ್ಲಾ ಖಾನ ಇವರುಗಳು ಮೈಸೂರಿನ ಆಸ್ಥಾನವಿದ್ವಾನರೆಂದು ಸನ್ಮಾನಿಸಲ್ಪಟ್ಟರು. "ಗಾಯಕರ ಜೊತೆಗೆ ಸಂಗೀತವಾದಕರನ್ನು ಅವರು ಆಮಂತ್ರಿಸಿ, ಗೌರವಿಸಿ, ಕರ್ನಾಟಕಿ ಹಿಂದುಸ್ತಾನಿ ಸಂಗೀತ ಪದ್ಧತಿಗಳೆರಡರ ಬಗೆಗೂ ಸಮಾನದೃಷ್ಟಿ, ಅಭಿಮಾನಗಳನ್ನು ತೋರಿದರು"[೪] ಹೀಗೆ ಆಮಂತ್ರಿಸಲ್ಪಡುತ್ತಿದ್ದ ಕಲಾವಿದರಲ್ಲಿ

---

೧. ಗ್ರಂಥ "ಉತ್ತರ ಕರ್ನಾಟಕದಲ್ಲಿ ಬಳೆದು ಬಂದ ಹಿಂದುಸ್ಥಾನಿ ಸಂಗೀತ ಘರಾಣೆಗಳ ಒಂದು ಅಧ್ಯಯನ" ಲೇ. ಡಾ. ಮೀರಾ ಶಿವಶಂಕರ ಗುಂಡಿ, ಪು. ೨೬, ಪ್ರಕಾಶನ ೨೦೦೧.

೨. ಅದೇ/ಪುಟ ೨೭

೩. ಅದೇ

೪. ಗ್ರಂಥ "ಉತ್ತರ ಕರ್ನಾಟಕದಲ್ಲಿ ಬಳೆದು ಬಂದ ಹಿಂದುಸ್ಥಾನಿ ಸಂಗೀತ ಘರಾಣೆಗಳ ಒಂದು ಅಧ್ಯಯನ" ಲೇ. ಡಾ. ಮೀರಾ ಶಿವಶಂಕರ ಗುಂಡಿ, ಪು. ೨೯, ಪ್ರಕಾಶನ ೨೦೦೧.

ಕೆಲವರು ಧಾರವಾಡ-ಹುಬ್ಬಳ್ಳಿ ನಗರಗಳಲ್ಲಿ ಬಂದು ತಮ್ಮ ಸಂಗೀತ ಕಛೇರಿಗಳನ್ನು ಮಾಡಿ ಅಲ್ಲೇ ಕೆಲವು ದಿನ ವಸತಿ ಇದ್ದು ಹಲವರನ್ನು ಹಿಂದುಸ್ತಾನಿ ಶಾಸ್ತ್ರೀಯ ಸಂಗೀತ ಪದ್ಧತಿಯಲ್ಲಿ ಪರಿಣತಿಗೊಳಿಸಿ ಇಲ್ಲಿ ತಮ್ಮ ಶಿಷ್ಯ ಪರಂಪರೆಯನ್ನು ಬೆಳೆಸಿದರು. ಮುಂದೆ ಧಾರವಾಡ ಹುಬ್ಬಳ್ಳಿ ಅಷ್ಟೇ ಅಲ್ಲದೆ ಕರ್ನಾಟಕದ ಹಲವಾರು ಭಾಗಗಳಲ್ಲಿ ಶಾಸ್ತ್ರೀಯ ಸಂಗೀತದ ಕಂಪನ್ನು ಪಸರಿಸಿದರು. ಮುಖ್ಯ ಘರಾನೆಗಳಾದ ಗ್ವಾಲಿಯರ, ಕಿರಾಣಾ, ಜೈಪುರ, ಆಗ್ರಾ ಸಂಗೀತ ಶೈಲಿಯನ್ನು ಇಲ್ಲಿ ಬೆಳೆಸಲು ಇವರು ಕಾರಣೀಭೂತರಾದರು.

ಹಿಂದುಸ್ತಾನಿ ಸಂಗೀತ ಕರ್ನಾಟಕದಲ್ಲಿ ಪರಿಚಯವಾಗುವ ಪೂರ್ವದಲ್ಲಿ ಕರ್ನಾಟಕ ಸಂಗೀತದ ಪ್ರಭಾವ ಇಲ್ಲಿ ಹೆಚ್ಚಾಗಿದ್ದದ್ದು ತಿಳಿದು ಬರುತ್ತದೆ. "ಉತ್ತರ ಕರ್ನಾಟಕದಲ್ಲಿ ಪ್ರಪ್ರಥಮವಾಗಿ ಹಿಂದುಸ್ತಾನಿ ಶಾಸ್ತ್ರೀಯ ಸಂಗೀತ ಬೆಳೆದು ಬರಲು ಕಾರಣೀಭೂತರಾದ ಶ್ರೆಯಸ್ಸು ಸುಪ್ರಸಿದ್ಧ ಗ್ವಾಲ್ಹೇರ್ ಸಂಗೀತ ಘರಾಣೆಯ ಪಂಡಿತ ಬಾಳಕೃಷ್ಣ ಬುವಾ ಈಚಲಕರಂಜಿಕರ ಅವರಿಗೆ ಸಲ್ಲುತ್ತದೆ."[೧] ಹೀಗೆಯೇ "೧೯೩೧ ರಲ್ಲಿಯೇ ಪ್ರೊ. ಗೋವಿಂದ ವಿಠ್ಠಲ ಭಾವೆಯವರು ಬೆಂಗಳೂರಿನಂಥ ಕರ್ನಾಟಕಿ ಸಂಗೀತದ ತವರು ಮನೆಯ ಅಂಗಳದಲ್ಲಿಯೇ 'ಶ್ರೀ ಸರಸ್ವತಿ ಸಂಗೀತ ವಿದ್ಯಾಲಯ' ಎಂದು ಹಿಂದೂಸ್ತಾನಿ ಸಂಗೀತ ಪಾಠಶಾಲೆಯನ್ನು ಪ್ರಾರಂಭಿಸಿದರು."[೨] ಈ ಸಂಗೀತ ವಿದ್ಯಾ ಸಂಸ್ಥೆಯು ಇಂದಿನವರೆಗೂ ಹಿಂದೂಸ್ತಾನಿ ಸಂಗೀತ ಶಿಕ್ಷಣವನ್ನು ಯಶಸ್ವಿಯಾಗಿ ನಡೆಸಿಕೊಂಡು ಬರುತ್ತಿದೆ. ಈಗ ಪ್ರೊ. ಗೋವಿಂದ ವಿಠ್ಠಲಭಾವೆಯವರ ಮಗಳಾದ ಶ್ಯಾಮಲಾಜಿ ಭಾವೆಯವರು ಹಿಂದುಸ್ತಾನಿ ಸಂಗೀತ ಶಿಕ್ಷಣ-ಪ್ರದಾನ ಕಾರ್ಯವನ್ನು ಸಮರ್ಪಕವಾಗಿ ನಡೆಸಿಕೊಂಡು ಹೋಗುತ್ತಿದ್ದಾರೆ. ಇದಲ್ಲದೇ ಪಂ. ರಾಮರಾವ ನಾಯಕ ಇವರು ಆಗ್ರಾ ಸಂಗೀತ ಘರಾಣೆಯವರಾಗಿದ್ದು ಇವರ ಪರಿಶ್ರಮದ ಫಲವಾಗಿ ಹಿಂದುಸ್ತಾನಿ ಸಂಗೀತವು ಪ್ರಗತಿ ಪರವಾಗಿ ಬೆಳೆದುದಲ್ಲದೆ ಈ ಸಂಗೀತದ ಕ್ಷೇತ್ರದಲ್ಲಿ ಅಸಂಖ್ಯ ಶಿಷ್ಯಂದಿರೂ ತಯಾರಾದರು. ಪಂಡಿತ ಪಂಚಾಕ್ಷರಿ ಗಾವಾಯಿಗಳವರ ಶಿಷ್ಯಂದಿರಾದ ಪಂಡಿತ ಶೇಷಾದ್ರಿ ಗವಾಯಿಗಳು ಹಿಂದೂಸ್ತಾನಿ ಸಂಗೀತದಲ್ಲಿ ಖ್ಯಾತರಾಗಿದ್ದು ಜೊತೆಗೆ 'ಗಾಯನ ಗಂಗಾ' ಎಂದು ಸಂಗೀತ ಮಾಸ ಪತ್ರಿಕೆಯನ್ನು ಸಂಪಾದಿಸಿದ್ದರು. ಶ್ರೀವತ್ಸ, ಡಾ. ವಸಂತ ಕವಲಿ, ಪಂ. ರಾಜೀವ ತಾರಾನಾಥ (ಸರೋದಿಯಾ), ಪಂಡಿತ ವಿನಾಯಕ ತೊರವಿ, ಪಂ ಪರಮೇಶ್ವರ ಹೆಗಡೆ ಮೊದಲಾದವರು ಸಹಿತ ಹಿಂದುಸ್ತಾನಿ ಸಂಗೀತವನ್ನು ಬೆಂಗಳೂರಿನಲ್ಲಿ ಪ್ರಚಾರಗೊಳಿಸಿದ್ದಾರೆ.

---

೧. ಗ್ರಂಥ"ಉತ್ತರ ಕರ್ನಾಟಕದಲ್ಲಿ ಬಳೆದು ಬಂದ ಹಿಂದುಸ್ಥಾನಿ ಸಂಗೀತ ಘರಾಣೆಗಳ ಒಂದು ಅಧ್ಯಯನ" ಲೇ. ಡಾ. ಮೀರಾ ಶಿವಶಂಕರ ಗುಂಡಿ, ಪು. ೨೫, ಪ್ರಕಾಶನ ೨೦೦೧.

೨. ಗ್ರಂಥ "ಉತ್ತರ ಕರ್ನಾಟಕದಲ್ಲಿ ಬಳೆದು ಬಂದ ಹಿಂದುಸ್ಥಾನಿ ಸಂಗೀತ ಘರಾಣೆಗಳ ಒಂದು ಅಧ್ಯಯನ" ಲೇ. ಡಾ. ಮೀರಾ ಶಿವಶಂಕರ ಗುಂಡಿ, ಪು. ೨೫, ಪ್ರಕಾಶನ ೨೦೦೧.



ಗಾನಯೋಗಿ ಪಂ. ಪಂಚಾಕ್ಷರಿ ಗವಾಯಿಗಳು



ಪಂಡಿತ ಪುಟ್ಟರಾಜ ಗವಾಯಿಗಳು

ಹೀಗೆಯೇ ಹಿಂದುಸ್ತಾನಿ ಸಂಗೀತ ಪರಂಪರೆ ಕರ್ನಾಟಕದಲ್ಲಿ ಬೆಳೆದು ಬರಲು ಮುಖ್ಯವಾದ ಶ್ರೇಯಸ್ಸು ಮತ್ತೊಬ್ಬ ಸಂಗೀತ ತಪಸ್ವಿ, "ಉಭಯ ಗಾನವಿಶಾರದ, ಗಾನಗಂಧರ್ವ ಗಾನಯೋಗಿ"[೧] ಲಯಬ್ರಹ್ಮರೆನಿಸಿದ ಗಾನಯೋಗಿ ಪಂಡಿತ ಪಂಚಾಕ್ಷರಿ ಗವಾಯಿಗಳಿಗೆ ಸಲ್ಲುತ್ತದೆ. ಪಂಡಿತ ಪಂಚಾಕ್ಷರಿ ಗವಾಯಿಗಳು ಹುಟ್ಟಾ ಕುರುಡರಾಗಿದ್ದು "ಕನ್ನಡಾಂಬೆಯ ಕೀರ್ತಿ ಬಾವುಟವನ್ನು ಸಂಗೀತ ಕ್ಷೇತ್ರದಲ್ಲಿ ಮುಗಿಲೆತ್ತರಕ್ಕೆ ಹಾರಿಸಿದವರು"[೨] ನೂರಾರು ಅಂಧರನ್ನು ಉದ್ಧಾರಮಾಡಿದ ಶಿವಯೋಗಿಗಳು ಇವರಾಗಿದ್ದಾರೆ. ಹಿಂದುಸ್ತಾನಿ ಸಂಗೀತದ ಶಿಕ್ಷಣಕ್ಕೆ ಮೀಸಲಾದ ವೀರೇಶ್ವರ ಪುಣ್ಯಾಶ್ರಮವನ್ನು ಹಾನಗಲ್ ಕುಮಾರಸ್ವಾಮಿಗಳ ಕೃಪಾಶೀರ್ವಾದದಿಂದ ಸಂಸ್ಥಾಪಿಸಿ ತನ್ಮೂಲಕ ಸಾವಿರಾರು ಜನ ಸಂಗೀತಗಾರರನ್ನು ನಾಡಿಗೆ ನೀಡಿದ ಒಬ್ಬ ದೊಡ್ಡ ಗಾಯನ ತಪಸ್ವಿಗಳು ಇವರು. ಅಲ್ಲದೇ ಇವರ ಎಲ್ಲ ಶಿಷ್ಯವೃಂದವು ದೇಶ ವಿದೇಶಗಳಲ್ಲಿ ಹಾಡಿ ಭೇಶ್ ಎನಿಸಿಕೊಂಡು ಆಶ್ರಮ ಸಂಗೀತದ ಒಂದು ಛಾಪನ್ನು ಮೂಡಿಸಿದವರಾಗಿದ್ದಾರೆ. ಅದರಲ್ಲಿ ಈಗಿನ ಮಠಾಧೀಶರಾದ ಪಂಡಿತ ಪುಟ್ಟರಾಜ ಗವಾಯಿಗಳು "ಪಂಡಿತ ಗುರುಬಸವಾರ್ಯ ಹಿರೇಮಠ, ಪಂಡಿತ ಮೃತ್ಯುಂಜಯ ಬುವಾ ಪುರಾಣಿಕಮಠ, ಪಂಡಿತ ಬಸವರಾಜ ರಾಜಗುರು, ಪ್ರೊ. ಪಂಚಕ್ಷರಿ ಸ್ವಾಮಿ ಮತ್ತಿಗಟ್ಟಿ, ದಿ. ಸಂಗೀತ ಸುಧಾಕರ ಸಿದ್ಧರಾಮ ಜಂಬಲದಿನ್ನಿ, ಪಂಡಿತ ಅರ್ಜುನಸಾ ನಾಕೋಡ, ಪಂಡಿತ ಸಿದ್ದರಾಮಯ್ಯ ಕೋರವಾರ, ಪಂಡಿತ ದೊಡ್ಡ ಬಸವಾರ್ಯ ಜಾಲಿಬೆಂಚಿ, ಪಂಡಿತ ಲಿಂಗರಾಜ ಬುವಾ ಕುಂದಗೋಳ, ಪಂಡಿತ ಶಿವಲಿಂಗ ಗವಾಯಿಗಳು ಬೂದಿಹಾಳ, ಪಂಡಿತ

---

೧. ಗ್ರಂಥ "ಗಾನಯೋಗಿ" ಲೇ. ಹಿ. ಮ. ನಾಗಯ್ಯ. ಪು.ಸಂ.೧ ಪ್ರಕಾಶನ ೧೯೮೯.
೨. ಗ್ರಂಥ "ಗಾನಯೋಗಿ ಪಂಚಾಕ್ಷರಿ ಗವಾಯಿಗಳು" ಲೇ. ವ್ಹಿ. ಬಿ. ಹಿರೇಮಠ, ಪು. ಸಂ. ೧. ಪ್ರಕಾಶನ ೧೯೯೮.

ಬಸಪ್ಪ ಗವಾಯಿಗಳು, ಪಂಡಿತ ಅಂದಾನಪ್ಪ ಗವಾಯಿಗಳು ಮುಂತಾದ ನೂರಾರು ಸಾವಿರಾರು ಜನ ಶಿಷ್ಯಂದಿರು ಗ್ವಾಲ್ಹೇರ ಸಂಗೀತ ಪರಂಪರೆಯಲ್ಲಿ ಅಖಿಲ ಭಾರತ ಖ್ಯಾತಿಯನ್ನು ಹೊಂದಿದರು."[೧] ಇವರೆಲ್ಲರೂ ಗುರು ಮುಖಾಂತರ ಸಂಗೀತವನ್ನು ಕಲಿತು ಮುಂದೆ ಹಾಗೆಯೇ ತಮ್ಮ ಶಿಷ್ಯ ವೃಂದವನ್ನು ಬೆಳೆಸುತ್ತ ಕರ್ನಾಟಕದಲ್ಲಿ ಹಿಂದೂಸ್ತಾನಿ ಸಂಗೀತವು ತಲೆ ಎತ್ತಿ ನಿಂತಿರುವ ಹಾಗೆ ಮಾಡಿದ್ದಾರೆ. ಹೀಗೆ ನಮ್ಮ ಕರ್ನಾಟಕದಲ್ಲಿ ಹಿಂದೂಸ್ತಾನಿ ಸಂಗೀತ ಬೆಳೆದು ಬರಲು ಕಾರಣವಾಗಿದೆ.

"ಉಭಯಗಾನ ವಿಶಾರದ" "ಸಂಗೀತ ರತ್ನ" "ಸಂಗೀತ ಸಮ್ರಾಟ" "ಲಲಿತಕಲಾ ಪಿತಾಮಹ" "ಗಾನಯೋಗಿ" "ಭೂಗಂಧರ್ವಚಂದ್ರ" "ಉಭಯ ಗಾನಾಚಾರ್ಯ" ಮೊದಲಾದ ಬಿರುದಾಂಕಿತರಾಗಿದ್ದ ಪಂಚಾಕ್ಷರಿ ಗವಾಯಿಗಳವರು ಕರ್ನಾಟಕದ ಸಾಂಸ್ಕೃತಿಕ ಮನೋಮಂದಿರವನ್ನು ತುಂಬಿಕೊಂಡಿದ್ದಾರೆ."[೨] ಇವರು ನಡೆಸಿಕೊಂಡು ಬರುತ್ತಿದ್ದ ವಿರೇಶ್ವರ ಪುಣ್ಯಾಶ್ರಮ ಸಂಗೀತ ಸಂಸ್ಥೆಯನ್ನು ಈಗ ಪಂಡಿತ ಪುಟ್ಟರಾಜ ಕವಿ ಗವಾಯಿಗಳ ನಡೆಸಿಕೊಂಡು ಬರುತ್ತಿದ್ದಾರೆ. ಇವರು ಸಹಿತ ವಿಶಾಲವಾದ ಶಿಷ್ಯವೃಂದವನ್ನು ಹೊಂದಿದ್ದು ಅವರಲ್ಲಿ ಪ್ರಮುಖರು ಪಂ. ಎಂ ವೆಂಕಟಕುಮಾರ,ಪಂ ಸೋಮನಾಥ ಮರಡೂರ, ಶ್ರೀ.ಡಿ. ಕುಮಾರದಾಸ, ಶ್ರೀ. ಮೌನೇಶಕುಮಾರ ಛಾವಣಿ.

ಲಿಂಗ್ಯಕ್ಯ ಪಂ. ಪಂಚಾಕ್ಷರಬುವಾ ಅವರ ಹಿರಿಯ ಶಿಷ್ಯ ಪರಂಪರೆಯಲ್ಲಿ ಪಂಡಿತ ಬಸವರಾಜ ರಾಜಗುರು ಇವರೂ ಒಬ್ಬರು. ಹಿಂದುಸ್ತಾನಿ ಸಂಗೀತ ಪ್ರಪಂಚದಲ್ಲಿ ದಿಗ್ಗಜರೆನಿಸಿಕೊಂಡ ಇವರಿಗೂ ಸಹ ಶ್ರೇಷ್ಠ ಶಿಷ್ಯ ಪರಂಪರೆಯಿದ್ದು. ಅವರಲ್ಲಿ ಪಂ. ಗಣಪತಿ ಭಟ್ಟ, ಪಂ. ಸೋಮನಾಥ ಮರಡೂರ ಪಂ. ಪರಮೇಶ್ವರ ಹೆಗಡೆ ಪ್ರೊ. ಶಾಂತರಾಮ ಹೆಗಡೆ,ಪೂರ್ಣಿಮಾ ಭಟ್ಟ, ಶ್ರೀಮತಿ ಸಂಗೀತಾ ಕಟ್ಟಿ (ಕುಲಕರ್ಣಿ), ಶ್ರೀಪಾದ ಹೆಗಡೆ, ಪಂ.ಶಿವಾನಂದ ಪಾಟೀಲ, ಮತ್ತು ಸದ್ಯ ಹಂಪಿ ಕನ್ನಡ ವಿಶ್ವವಿದ್ಯಾಲಯದ ಸಂಗೀತ ಮತ್ತು ನೃತ್ಯ ವಿಭಾಗದ ಮುಖ್ಯಸ್ಥರಾದ ಡಾ.ಹನುಮಣ್ಣಾ ನಾಯಕ ದೊರೆಯವರು ಪ್ರಮುಖರು.

ಪಂ.ಗಣಪತಿ ಭಟ್ಟ ಇವರು ಒರ್ವ ಪ್ರತಿಭಾನ್ವಿತ ಹಿರಿಯ ಗಾಯಕರೆಂದು ದೇಶ ವಿದೇಶಗಳಲ್ಲಿ ಖ್ಯಾತಿ ಹೊಂದಿದ್ದಾರೆ. ಇವರು ಧಾರವಾಡ ಆಕಾಶವಾಣಿಯ 'ಎ' ಶ್ರೇಣಿಯ ಕಲಾವಿದರಾಗಿದ್ದಾರೆ. ಇವರು ಹಾಸಣಗಿಯಲ್ಲಿ ಗುರುಕುಲವನ್ನು ಪ್ರಾರಂಭಿಸಿ ಅದರಲ್ಲಿ ಅನೇಕ ಶಿಷ್ಯರಿಗೆ ಸಂಗೀತ ಶಿಕ್ಷಣ ನೀಡುತ್ತಿದ್ದಾರೆ.

---

೧. ಗ್ರಂಥ "ಉತ್ತರ ಕರ್ನಾಟಕದಲ್ಲಿ ಬಳೆದು ಬಂದ ಹಿಂದುಸ್ಥಾನಿ ಸಂಗೀತ ಘರಾಣೆಗಳ ಒಂದು ಅಧ್ಯಯನ" ಲೇ. ಡಾ. ಮೀರಾ ಶಿವಶಂಕರ ಗುಂಡಿ, ಪು. ೩೭, ಪ್ರಕಾಶನ ೨೦೦೧.

೨. ಗ್ರಂಥ "ಗಾನಯೋಗಿ" ಲೇಖಕರು, ಹಿ.ಮು. ನಾಗಯ್ಯ, ಪು. ಸಂ. ೭೪,

ಪಂ ಪುಟ್ಟರಾಜ ಗವಾಯಿಗಳ ಇನ್ನೊಬ್ಬ ಹಿರಿಯ ಶಿಷ್ಯರಾದ ಪಂ ಸೋಮನಾಥ ಮರಡೂರ ಇವರು ಪಂಡಿತ ಬಸವರಾಜ ರಾಜಗುರು ಇವರಲ್ಲಿಯೂ ಸಹ ಸಂಗೀತ ಅಧ್ಯಯನವನ್ನು ಮಾಡಿದ್ದಾರೆ. ಇವರ ಮಕ್ಕಳಾದ ಶ್ರೀಮತಿಯರಾದ ವೀಣಾ ಮತ್ತು ವಾಣಿ ಹಾಗೂ ಪುತ್ರರಾದ ಕುಮಾರ ಮರಡೂರ ಇವರೆಲ್ಲರೂ ಉಜ್ವಲ ಭವಿಷ್ಯ ಹೊಂದಿದ ಕಲಾವಿದರಾಗಿದ್ದಾರೆ.

ಪಂ ಪರಮೇಶ್ವರ ಹೆಗಡೆಯವರು ಬೆಂಗಳೂರ ಆಕಾಶವಾಣಿಯ 'ಎ' ಶ್ರೇಣಿಯ ಕಲಾವಿದರಾಗಿದ್ದು ದೇಶ ವಿದೇಶಗಳಲ್ಲಿ ಸಂಗೀತ ಕಾರ್ಯಕ್ರಮಗಳನ್ನು ಕೊಟ್ಟು ಪಂಡಿತ ಬಸವರಾಜ ರಾಜಗುರು ಅವರ ಹೆಸರನ್ನು ಖ್ಯಾತಿಗೊಳಿಸಿದ್ದಾರೆ. ಇವರು ಬೆಂಗಳೂರಲ್ಲಿ ಅನೇಕ ಶಿಷ್ಯರನ್ನು ಸಂಗೀತಾಭ್ಯಾಸದಲ್ಲಿ ತರಬೇತಿಗೊಳಿಸುತ್ತಿದ್ದಾರೆ.

ಪ್ರೊ.ಶಾಂತರಾಮ ಹೆಗಡೆ ಯವರು ಪಂಡಿತ ಬಸವರಾಜ ರಾಜಗುರು ಅವರ ಶಿಷ್ಯರಾಗಿದ್ದು ಧಾರವಾಡ ಕರ್ನಾಟಕ ಕಾಲೇಜಿನಲ್ಲಿ ಸಂಗೀತ ಪ್ರಾಧ್ಯಾಪಕರಾಗಿ ಕೆಲಸ ಮಾಡುತ್ತಿದ್ದಾರೆ ಹಾಗೂ ಸಂಗೀತದಲ್ಲಿ ಅನೇಕ ಶಿಷ್ಯರನ್ನು ತರಬೇತಿಗೊಳಿಸಿದ್ದಾರೆ.

ಶ್ರೀಮತಿ ಸಂಗೀತ ಕಟ್ಟಿ (ಕುಲಕರ್ಣಿ) ಇವರು ಪಂಡಿತ ಬಸವರಾಜ ರಾಜಗುರುಗಳಲ್ಲಿ ಸಂಗೀತವನ್ನು ಕಲಿತು ಬೆಂಗಳೂರಲ್ಲಿ ವಾಸವಾಗಿದ್ದಾರೆ ಶಾಸ್ತ್ರೀಯ ಸಂಗೀತದಲ್ಲಿ ಪರಿಣತಿ ಹೊಂದಿರುವದಲ್ಲದೇ ಸುಗಮ ಸಂಗೀತ ದಲ್ಲಿಯೂ ಹೆಸರುಗಳಿಸಿದ್ದಾರೆ, ಹಾಗೂ ದೂರದರ್ಶನ ಮತ್ತು ಆಕಾಶವಾಣಿಯ ಕಲಾವಿದರಾಗಿದ್ದಾರೆ. ಅನೇಕ ಚಲನಚಿತ್ರಗಳಿಗೂ ಹಿನ್ನೆಲೆ ಸಂಗೀತ ನೀಡಿದ್ದಾರೆ.

ಶ್ರೀ ಶ್ರೀಪಾದ ಹೆಗಡೆ ಇವರು ಆಕಾಶವಾಣಿ ಧಾರವಾಡದಲ್ಲಿ 'ಬಿ.ಹೈ.' ಶ್ರೇಣಿಯ ಕಲಾವಿದರಾಗಿದ್ದು ಆಕಾಶವಾಣಿಯಲ್ಲಿಯೇ ಸೇವೆ ಸಲ್ಲಿಸುತ್ತಿದ್ದಾರೆ ಮತ್ತು ಅನೇಕ ಸಂಗೀತ ಕಛೇರಿಗಳಲ್ಲಿ ಹಾಡಿ ಪ್ರಶಂಸೆಪಡೆದಿದ್ದಾರೆ. ಇವರ ಶಿಷ್ಯವೃಂದ ವಿಶಾಲವಾಗಿದ್ದು ಅವರೂ ಶಾಸ್ತ್ರೀಯ ಹಾಗೂ ಸುಗಮ ಸಂಗೀತದಲ್ಲಿ ಮುನ್ನಡೆ ಸಾಧಿಸಿದ್ದಾರೆ.

ಪಂಡಿತ ಅರ್ಜುನಸಾ ನಾಕೋಡ ಇವರು ಧಾರವಾಡ ಆಕಾಶವಾಣಿಯ 'ಎ' ಶ್ರೇಣಿಯ ಕಲಾವಿದರಾಗಿದ್ದು ಪಂಡಿತ ಗಾನಯೋಗಿ ಪಂಚಾಕ್ಷರಿಗವಾಯಿಗಳವರ ಹಿರಿಯ ಶಿಷ್ಯರಾಗಿದ್ದರು. ಗುರು ಕೃಪೆಯಿಂದ ಇವರ ಮನೆತನವೆಲ್ಲವು ಸಂಗೀತದ ವಿವಿಧ ಕ್ಷೇತ್ರದಲ್ಲಿ ಪ್ರಾವೀಣ್ಯತೆ ಹೊಂದಿದ್ದು ಇಂದಿಗೂ ಈ ಕ್ಷೇತ್ರದಲ್ಲಿ ಕರ್ನಾಟಕದ ಕೀರ್ತಿಯನ್ನು ದೇಶಾದ್ಯಂತ ಮೆರೆಸುವದರಲ್ಲಿ ಯಶಸ್ವಿಯಾಗಿದ್ದಾರೆ. ಹಿರಿಯ ಚಿರಂಜೀವಿ ಪಂಡಿತ ರಘುನಾಥ ನಾಕೋಡ ಇವರು ತಬಲಾವಾದನದಲ್ಲಿ ಅಗ್ರಗಣ್ಯರೆನಿಸಿಕೊಂಡಿದ್ದು ಆಕಾಶವಾಣಿಯ 'ಎ ಟಾಪ' ಶ್ರೇಣಿಯ ಕಲಾವಿದರಾಗಿ ಕರ್ನಾಟಕದಲ್ಲಿ ಪ್ರಥಮರೆನಿಸಿಕೊಂಡಿದ್ದಾರೆ. ಇವರ ಪತ್ನಿ ಶ್ರೀಮತಿ ರೇಣುಕಾ

ಇವರು ಆಕಾಶವಾಣಿ ಹಾಗೂ ದೂರದರ್ಶನ ಸಂಗೀತ ಕಲಾವಿದರಾಗಿದ್ದಾರೆ. ಪಂಡಿತ ಅರ್ಜುನಸಾ ನಾಕೋಡ ರವರ ಇರ್ನ್ನೋರ್ವ ಪುತ್ರರಾದ ಶ್ರೀ ಬಾಲಚಂದ್ರ ನಾಕೋಡ ಇವರು ಆಕಾಶವಾಣಿಯ 'ಎ' ಶ್ರೇಣಿಯ ಸಂಗೀತ ಕಲಾವಿದರು ಹಾಗೂ ದೂರದರ್ಶನ ಕಲಾವಿದರು ಆಗಿದ್ದಾರೆ. ಪಂಡಿತ ಅರ್ಜುನಸಾ ನಾಕೋಡರವರ ಕಿರಿಯ ಪುತ್ರರಾದಂತಹ ಶ್ರೀಯುತ ವಿಶ್ವನಾಥ ನಾಕೋಡ ಆಕಾಶವಾಣಿ ಬೆಂಗಳೂರ ನಿಲಯದ 'ಎ' ಶ್ರೇಣಿಯ ತಬಲಾ ಕಲಾವಿದರಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಕೊನೆಯ ಪುತ್ರರಾದ ರಾಜೇಂದ್ರ ನಾಕೋಡ ಇವರೂ ಸಹಿತ ಧಾರವಾಡ ಆಕಾಶವಾಣಿಯ ಹಾಗೂ ದೂರದರ್ಶನದ 'ಎ' ಶ್ರೇಣಿಯ ತಬಲಾ ಕಲಾವಿದರಾಗಿದ್ದಾರೆ.

ಪಂಡಿತ ಅರ್ಜುನಸಾ ನಾಕೋಡ ಇವರ ಶಿಷ್ಯ ವೃಂದದ ವಿವರಗಳು ಹೀಗಿವೆ. ಜಯ ತೀರ್ಥ ಮೆವುಂಡಿ, ಬೆಂಗಳೂರ ಆಕಾಶವಾಣಿಯಲ್ಲಿ "ಎ" ಶ್ರೇಣಿಯ ಸಂಗೀತಗಾರರು . ಸದಾಶಿವ ಐಹೊಳೆ, ಇವರು ಗೋವಾ ಆಕಾಶವಾಣಿಯಲ್ಲಿ 'ಬಿ.ಹೈ' ಶ್ರೇಣಿಯ ಸಂಗೀತ ಕಲಾವಿದರಾಗಿದ್ದಾರೆ. ಕುಮಾರಿ ಶಕ್ತಿ ಪಾಟೀಲ , ಶ್ರೀಮತಿ ಸ್ಮಿತಾ ಬೆಳ್ಳೂರು, ಶ್ರೀ. ರವೀಂದ್ರ ಸೋರಗಾವಿ, ಶ್ರೀ. ಸಂಜೀವ ಮುತಗೀಕರ, ಶ್ರೀ.ಹನಮಂತರಾವ ಗೋನವಾರ ಇವರು ಸಹಿತ ಆಕಾಶವಾಣಿ ಹಾಗೂ ದೂರದರ್ಶನದಲ್ಲಿ ಕಾರ್ಯಕ್ರಮ ನೀಡುತ್ತಿದ್ದಾರೆ.

"ಉತ್ತರ ಕರ್ನಾಟಕದಲ್ಲಿ ಜೈಪುರ ಘರಾಣೆಯು ಅತ್ಯಂತ ಪ್ರಭಾವಶಾಲಿಯಾಗಿ ಬೆಳೆದು ಬಂದ ಶ್ರೇಯಸ್ಸು ಡಾ.ಮಲ್ಲಿಕಾರ್ಜುನ ಮನಸೂರ ಅವರಿಗೆ ಸಲ್ಲುತ್ತದೆ. ಡಾ. ಮನ್ಸೂರ ಅವರು ಉತ್ತರ ಕರ್ನಾಟಕದ ಏಕಮೇವಾದ್ವಿತೀಯ ಕಲಾವಿದರಾಗಿ ಅಂತರಾಷ್ಟ್ರೀಯ ಖ್ಯಾತಿಯನ್ನು ಹೊಂದಿದವರಾಗಿದ್ದಾರೆ."[೧] ಇವರು ಮೂಲತಃ ಕಲಿತದ್ದು ಗ್ವಾಲ್ಹೇರ ಸಂಗೀತ ಪರಂಪರೆ ಆದರೆ ಮನ್ಸೂರ ಅವರು ಉನ್ನತಮಟ್ಟದ ಸಂಗೀತವನ್ನು ಕಲಿಯಬೇಕು ಎಂಬ ಉದ್ದೇಶದಿಂದ ಜೈಪುರ ಸಂಗೀತ ಪುಣಾಲಿಗೆ ಸೇರಿದರು ಮತ್ತು ಇದರಲ್ಲಿ ಸಾಧನೆ ಮಾಡಿ ಜೈಪುರ ಘರಾಣೆಯ ಉದ್ದಾಮ ಗಾಯಕರೆಂದು ಖ್ಯಾತಿ ಹೊಂದಿದವರಾಗಿದ್ದಾರೆ. ಇವರಿಗೆ ಅನೇಕ ಪ್ರತಿಭಾವಂತ ಶಿಷ್ಯಂದಿರು ಇದ್ದು ಉತ್ತರ ಕರ್ನಾಟಕದಲ್ಲಿ ಜೈಪುರ ಸಂಗೀತ ಘರಾಣೆಯ ಪ್ರತಿಭಾಶಾಲಿಯಾಗಿ ಬೆಳೆದು ಬರಲು ಕಾರಣವಾಯಿತು. ಡಾ. ಮನ್ಸೂರರ ಶಿಷ್ಯ ವೃಂದದಲ್ಲಿ ದಿ.ಶ್ರೀ ಸಿದ್ದರಾಮ ಜಂಬಲದಿನ್ನಿ ಶ್ರೀ.ಬಿ.ಸಿ.ಪಾಟೀಲ, ಪಂ ಪಂಚಾಕ್ಷರಿ ಸ್ವಾಮಿ ಮತ್ತಿಗಟ್ಟಿ, ಶ್ರೀಮತಿ ಗೋದುಬಾಯಿ ಹಾನಗಲ್ಲ, ಪ್ರೊ. ಅಜ್ಜಣ್ಣ ಪಾಟೀಲ, ದಿ. ರಾಜೀವ ಪುರಂದರೆ, ದಿ. ವಾಯ್. ಎಸ್. ಬಂಗ್ಲೇದ, ಶ್ರೀ ಭಾವು ಸಾಹೇಬ ಬಿರ್ಡಿಕರ ಮೊದಲಾದವರು ಪ್ರಮುಖರಾಗಿದ್ದಾರೆ. ಇವರಲ್ಲಿ ಪಂ.ಪಂಚಾಕ್ಷರಿ ಸ್ವಾಮಿ ಮತ್ತಿಗಟ್ಟಿಯವರು ಆಕಾಶವಾಣಿಯ "ಎ" ಶ್ರೇಣಿಯ ಕಲಾವಿದರಾಗಿ ಇವರೂ ಅನೇಕ ಜನ

---

೧. ಗ್ರಂಥ- ಉತ್ತರ ಕರ್ನಾಟಕದಲ್ಲಿ ಬಳೆದು ಬಂದ ಹಿಂದೂಸ್ಥಾನಿ ಸಂಗೀತ ಘರಾಣೆಗಳ ಒಂದು ಅಧ್ಯಯನ, ಲೇ. ಡಾ. ಮೀರಾ ಶಿವಶಂಕರ ಗುಂಡಿ, ಪು. ಸಂ. ೪೪. ಪ್ರಕಾಶನ ೨೦೦೧.

ಶಿಷ್ಯಂದಿರನ್ನು ಪಡೆದಿದ್ದಾರೆ. ಅವರಲ್ಲಿ ಪ್ರೊ.ವೀರಣ್ಣಾ ಹೂಗಾರ, ಡಾ. ಮೀರಾ ಶಿವಶಂಕರ ಗುಂಡಿ, ಶ್ರೀಮತಿ ಗೀತಾ ಜಾವಡೇಕರ, ಶ್ರೀಮತಿ ಸೊನ್ನಿ, ಶ್ರೀಮತಿ ಮುಕ್ತಾ ಮುಜುಂದಾರ ಮುಂತಾದವರು ಜೈಪುರ ಘರಾಣೆಯ ಪರಂಪರೆಯನ್ನು ಕರ್ನಾಟಕದಲ್ಲಿ ಬೆಳೆಸಿಕೊಂಡು ಬಂದಿದ್ದಾರೆ.

ಡಾ. ಮಲ್ಲಿಕಾರ್ಜುನ ಮನ್ಸೂರವರ ಪುತ್ರರಾದ ಪ್ರೊ. ರಾಜಶೇಖರ ಮನ್ಸೂರವರು ಕರ್ನಾಟಕ ವಿಶ್ವವಿದ್ಯಾಲಯದ ಇಂಗ್ಲೀಷ ವಿಭಾಗದಲ್ಲಿ ಆಂಗ್ಲ ಭಾಷಾ ಪ್ರಾಧ್ಯಾಪಕರಾಗಿದ್ದರು. ಇವರ ಸಂಗೀತ ಶಿಕ್ಷಣವು ತಂದೆಯವರಲ್ಲಿಯೇ ಆಗಿ ಧಾರವಾಡ ಆಕಾಶವಾಣಿಯ 'ಎ ಟಾಪ' ಶ್ರೇಣಿಯ ಸಂಗೀತ ಕಲಾವಿದರಾಗಿದ್ದಾರೆ. ಈಗ ಸಧ್ಯದಲ್ಲಿ ಬೆಂಗಳೂರಲ್ಲಿ ವಾಸವಾಗಿ ಅಲ್ಲಿ ಅನೇಕ ಶಿಷ್ಯಂದಿರಿಗೆ ಸಂಗೀತ ತರಬೇತಿ ನೀಡುತ್ತಿದ್ದಾರೆ. ಡಾ. ಮಲ್ಲಿಕಾರ್ಜುನ ಮನ್ಸೂರ ವರ ದ್ವಿತೀಯ ಪುತ್ರಿಯಾದ ಶ್ರೀಮತಿ. ನೀಲಾ. ಎಂ.ಕೊಡ್ಲಿಯವರು ಕೂಡ ಖ್ಯಾಲ ಮತ್ತು ಲಘು ಸಂಗೀತ ಪ್ರಣಾಲಿ ಎರಡರಲ್ಲೂ ಉತ್ತಮ ಕಲಾವಿದೆಯಾಗಿ ಹೆಸರು ಪಡೆದಿದ್ದಾರೆ ಮತ್ತು ಇವರು ಆಕಾಶವಾಣಿ ಹಾಗೂ ದೂರದರ್ಶನ ಕಲಾವಿದರಾಗಿದ್ದಾರೆ.

ಪಂಡಿತ ಗುರುರಾವ ದೇಶಪಾಂಡೆಯವರು ರಾಮಕೃಷ್ಣ ಬುವಾ. ಅವರಲ್ಲಿ ಸಂಗೀತ ಅಧ್ಯಯನ ಮಾಡಿದರು. ಗ್ವಾಲ್ಹೇರ ಸಂಗೀತ ಪರಂಪರೆಯು ಉತ್ತರ ಕರ್ನಾಟಕದಲ್ಲಿ ಬೆಳೆದುಕೊಂಡು ಬರಲು ಇವರು ಬಹಳಷ್ಟು ಪರಿಶ್ರಮಿಸಿದರು. ಇವರ ಶಿಷ್ಯರಲ್ಲಿ ಅಗ್ರಗಣ್ಯ ರಾದವರೆಂದರೆ ಪಂಡಿತ ನಾರಾಯಣರಾವ ಮುಜುಂದಾರರು. ಪಂ ಗುರುರಾವ ದೇಶಪಾಂಡೆಯವರ ಇನ್ನುಳಿದ ಶಿಷ್ಯಂದಿರಲ್ಲಿ ಪ್ರಮುಖರಾದವರು ದಿ.ರಾಜೀವ ಪುರಂದರೆ, ಶ್ರೀಮತಿ ಲತಾ ನಾಡಗೇರ, ಶ್ರೀಮತಿ ಸುನಂದಾ ಕಡಪಾ, ಶ್ರೀಮತಿ ವಿಜಯಾ ಲಿಂಗಸೂರ, ಶ್ರೀ. ಲಕ್ಷ್ಮೇಶ್ವರ ವಕೀಲರು, ಶ್ರೀಮತಿ ಲಕ್ಷ್ಮಿಬಾಯಿ ದಾತಾರ, ಶ್ರೀ ವಿ.ಜಿ. ಜೋಶಿ, ಆರ, ಎನ್. ದೇಶಪಾಂಡೆ, ದಿ. ಲೋಣಕಡೆ, ಶ್ರೀಮತಿ ಡಿ. ಎಚ. ಹಾವನೂರ ಮುಂತಾದವರು.

"ಪಂ. ಗುರುರಾದ ದೇಶಪಾಂಡೆಯವರ ಸಮಕಾಲೀನರಾದ ದಿ.ನಾರಾಯಣಚಾರ ದಂಡಾಪೂರ ಅವರು ಉತ್ತರ ಕರ್ನಾಟಕದಲ್ಲಿ ಗ್ವಾಲ್ಹೇರ ಸಂಗೀತ ಪ್ರಣಾಲಿ ಬೆಳೆದು ಬರಲು ಕಾರಣೀಭೂತರಾಗಿದ್ದಾರೆ."[೧] ಧಾರವಾಡದ ರವಿವಾರ ಪೇಟೆಯಲ್ಲಿ ಧರ್ಮಾರ್ಥ ಸಂಗೀತ ಪಾಠಶಾಲೆ ಸ್ಥಾಪಿಸಿದರು. ದಿ. ದಂಡಾಪೂರ ಅವರ ಮಕ್ಕಳಾದ ಶೇಷಗಿರಿ ದಂಡಾಪೂರ ಅವರು ಈ ಪಾಠಶಾಲೆಯನ್ನು ಮುಂದುವರೆಸಿಕೊಂಡು ನಡೆದಿದ್ದು ಇವರು ಆಕಾಶವಾಣಿ ಕಲಾವಿದರೂ ಆಗಿದ್ದಾರೆ.

ಹುಬ್ಬಳ್ಳಿಯ ಪಂ.ವೀರಣ್ಣಾ ಕಾಮುಕರವರು ಗಾಯನ, ವಾದ್ಯ ಕಲೆಗಳಲ್ಲಿ

---

೧. ಗ್ರಂಥ- ಉತ್ತರ ಕರ್ನಾಟಕದಲ್ಲಿ ಬಳೆದು ಬಂದ ಹಿಂದೂಸ್ಥಾನಿ ಸಂಗೀತ ಘರಾಣೆಗಳ ಒಂದು ಅಧ್ಯಯನ, ಲೇ. ಡಾ. ಮೀರಾ ಶಿವಶಂಕರ ಗುಂಡಿ, ಪು. ಸಂ. ೩೪. ಪ್ರಕಾಶನ ೨೦೦೧.

ಪರಿಣತರಿದ್ದರು. ಪಂಡಿತ ರಘುನಾಥ ನಾಕೋಡರವರತಂಹ ತಬಲಾ ವಿದ್ವಾನರನ್ನು ತಯಾರು ಮಾಡಿದ ಶ್ರೇಯಸ್ಸು ಇವರದಾಗಿದೆ. ಪಂಡಿತ ವೀರಣ್ಣಾ ಕಾಮಕರರ ಮಗಳಾದ ಕುಮಾರಿ. ಗಾಯತ್ರಿ ಕಾಮಕರವರು ನವನಗರ ಹುಬ್ಬಳ್ಳಿಯಲ್ಲಿ "ಗಾಯತ್ರಿ ಗಾಯನ ಶಾಲಾ" ವೆಂಬ ಸಂಗೀತ ಪಾಠಶಾಲೆಯನ್ನು ನಡೆಸುತ್ತಿದ್ದಾರೆ. ಇಲ್ಲಿ ತಬಲಾ, ಗಾಯನ, ಸಿತಾರಗಳ ಕಲಾ ಅಭ್ಯಾಸವನ್ನು ಹೇಳಿ ಕೊಡುತ್ತಿದ್ದು ಅನೇಕ ಶಿಷ್ಯರನ್ನು ತಯಾರು ಮಾಡುತ್ತಿದ್ದಾರೆ. ಯರಗುಪ್ಪಿಯ ನಿಂಗಪ್ಪ ಗವಾಯಿಗಳು ವಾಮನರಾವ ಮಾಸ್ತರರ ನಾಟಕ ಕಂಪನಿಯಲ್ಲಿ ಗಾಯಕ ನಟರಾಗಿ ಸೇವೆ ಸಲ್ಲಿಸುತ್ತಿದ್ದು ಪಂಡಿತ ನೀಲಕಂಠಬುವಾ ಮಿರಜಕರವರ ಹತ್ತಿರ ಸಂಗೀತ ಪಾಠ ಮಾಡಿ ಗ್ವಾಲ್ಹೇರ ಸಂಗೀತ ಶೈಲಿಯನ್ನು ಅವಗತ ಮಾಡಿಕೊಂಡರು. "ಕುಂದಗೋಳ, ಯರಗುಪ್ಪಿ, ನಲವಡಿ, ಮುಂತಾದ ಸುತ್ತಮುತ್ತಲಿನ ಹಳ್ಳಿಗಳಲ್ಲಿ ಶ್ರೀ ನಿಂಗಪ್ಪನವರ ಶಿಷ್ಯರಿದ್ದು ಈ ಭಾಗದಲ್ಲಿ ಗ್ವಾಲ್ಹೇರ ಸಂಗೀತವು ಸಜೀವವಾಗಿದೆ."[೧]

ಉಸ್ತಾದ ಅಬ್ದುಲ ಕರಿಂ ಖಾನ ಸಾಹೇಬರು ಕರ್ನಾಟಕದ ಮೂಲೆ ಮೂಲೆಗಳಲ್ಲಿ ಸಂಚರಿಸಿ ಕಿರಾಣಾ ಸಂಗೀತ ಪರಂಪರೆಯ ಪ್ರಚಾರ ಮಾಡಿದರು. ತಮ್ಮ ಪ್ರವಾಸದಲ್ಲಿ ಅವರು ಧಾರವಾಡ-ಹುಬ್ಬಳ್ಳಿಗಳಲ್ಲಿ ವಿಶ್ರಾಂತಿಗಾಗಿ ಕೆಲಕಾಲ ತಂಗುತ್ತಿದ್ದರು. ಈ ಕಾಲಾವಧಿಯಲ್ಲಿ ಖಾನ ಸಾಹೇಬರಿಗೆ ಅನೇಕ ಶಿಷ್ಯಂದಿರು ದೊರೆತರು. ಇವರ ಸಂಗೀತಕ್ಕೆ ಮನವಲಿದು ಕುಂದಗೋಳದ ರಾಮರಾಯರು ಖಾನ ಸಾಹೇಬರ ಶಿಷ್ಯತ್ವವನ್ನು ಪಡೆದು ಕಿರಾಣಾ ಘರಾಣೆ ಸಂಗೀತ ಸೇವೆಯಲ್ಲಿ ಪರಿಣಿತರಾದರಲ್ಲದೇ ಸವಾಯಿ ಗಂಧರ್ವರೆಂಬ ಖ್ಯಾತನಾಮರಿಂದ ಅಖಿಲ ಭಾರತದಲ್ಲಿ ಪ್ರಸಿದ್ಧರಾದರು. ಡಾ. ಗಂಗೂಬಾಯಿಯವರು ಪಂ.ಸವಾಯಿ ಗಂಧರ್ವರಲ್ಲಿ ಶಿಷ್ಯತ್ವ ಹೊಂದಿ ಉತ್ತರ ಕರ್ನಾಟಕದ ಕಿರಾಣಾ ಘರಾಣೆಯ ಏಕಮೇಮ ಹಿರಿಯ ಸಂಗೀತ ಕಲಾವಿದೆ ಎನಿಸಿಕೊಂಡು ಅಂತರಾಷ್ಟ್ರೀಯ ಖ್ಯಾತಿಯನ್ನು ಹೊಂದಿದವರಾಗಿದ್ದಾರೆ. ಇವರ ಪುತ್ರಿ ದಿ. ಶ್ರೀಮತಿ ಕೃಷ್ಣಾ ಹಾನಗಲ್ಲರವರೂ ತಾಯಿಯ ಸಂಗೀತ ಗರಡಿಯಲ್ಲಿ ನುರಿತು ಆಕಾಶವಾಣಿಯ 'ಎ' ಶ್ರೇಣಿಯ ಸಂಗೀತ ಕಲಾವಿದೆಯರಾಗಿದ್ದರು. "ಡಾ.ಗಂಗೂಬಾಯಿಯವರಿಗೆ ಅನೇಕ ಜನ ಶಿಷ್ಯರಿದ್ದು ಅಂಥವರಲ್ಲಿ ಶ್ರೀಮತಿ ಸುಲಭಾ ದತ್ತ ಮತ್ತು ನಾಗನಾಥ ಒಡೆಯರ ಪ್ರಮುಖರಾಗಿದ್ದಾರೆ."[೨]

ಪಂಡಿತ ಸಂಗಮೇಶ್ವರ ಗುರವ ಅವರು ಕಿರಾಣಾ ಘರಾಣೆಯ ಸಂಗೀತ ಪರಂಪರೆಯ ಪರಿಶುದ್ಧ ಗಾಯಕಿಯಿಂದ ಸಮೃದ್ಧರಾಗಿದ್ದಾರೆ. ಕರ್ನಾಟಕ ವಿಶ್ವವಿದ್ಯಾಲಯದ ಸ್ನಾತಕೋತ್ತರ ಸಂಗೀತ ಮತ್ತು ಲಲಿತ ಕಲಾ ವಿಭಾಗದಲ್ಲಿ ಸಂಗೀತ ಪ್ರಾಧ್ಯಾಪಕರಾಗಿದ್ದರು. ಇವರ ಹಿರಿಯ ಮಗ

---

೧. ಗ್ರಂಥ- ಉತ್ತರ ಕರ್ನಾಟಕದಲ್ಲಿ ಬಳೆದು ಬಂದ ಹಿಂದೂಸ್ಥಾನಿ ಸಂಗೀತ ಘರಾಣೆಗಳ ಒಂದು ಅಧ್ಯಯನ, ಲೇ. ಡಾ. ಮೀರಾ ಶಿವಶಂಕರ ಗುಂಡಿ, ಪು. ಸಂ. ೪೧. ಪ್ರಕಾಶನ ೨೦೦೧.

೨. ಅದೇ ಪುಟ ೫೩.

ನಂದಿಕೇಶ್ವರ ಉತ್ತಮ ತಬಲಾ ಕಲಾವಿದರಾಗಿದ್ದು ಪಂ ರಘುನಾಥ ನಾಕೋಡರ ಶಿಷ್ಯರು ಆಗಿದ್ದಾರೆ ಹಾಗೂ ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ತಬಲಾ ಸಾಥಿದಾರರೆಂದು ಸೇವೆ ಸಲ್ಲಿಸುತ್ತಿದ್ದಾರೆ. ಇನ್ನೋರ್ವ ಪುತ್ರರಾದ ಪಂ ಕೈವಲ್ಯ ಕುಮಾರ ಗುರವ ಅವರು ದೇಶ ವಿದೇಶಗಳಲ್ಲಿ ತಮ್ಮ ಸಂಗೀತ ಕಾರ್ಯಕ್ರಮ ನೀಡಿ ತಂದೆಯವರ ಹೆಸರನ್ನು ಮೇಲೆ ಎತ್ತಿ ಮೆರೆಸಿದ್ದಾರೆ.

ಬೆಳಗಾವಿಯ ಪಂ ಆರ. ಎನ್. ಜೋಶಿ ಬುವಾ ಆವರು ಪಂ. ಕಾಗಲಕರ ಬುವಾ ಮತ್ತು ರಾಮಕೃಷ್ಣ ಬುವಾ ಶಿರೋಡ್ಕರಬುವಾ ಇವರಲ್ಲಿ ಸಂಗೀತ ಆಧ್ಯಯನ ಮಾಡಿದ್ದು ಬೆಳಗಾವಿಯ ಕಿರಾಣಾ ಘರಾಣೆಯ ಹಿರಿಯ ಕಲಾವಿದರೆಂದು ಹೆಸರುಗಳಿಸಿದ್ದಾರೆ. ಪಂ. ಆರ. ಎನ್ ಜೋಶಿಯವರು ಅನೇಕ ಶಿಷ್ಯಂದಿರನ್ನು ಹೊಂದಿದ್ದು ಅವರಲ್ಲಿ ಶ್ರೀಮತಿ ಸುಧಾ ದಿವೇಕರ, ಶ್ರೀ ಅನಂತ ತೇರದಾಳ, ಶ್ರೀಮತಿ ರಜನಿ ಚಂದಾವರಕರ, ಶ್ರೀಮತಿ ಪದ್ಮಾಕ್ಷಿ ಪೂಜಾರ, ಶ್ರೀಮತಿ. ವಸುಧಾ ಕುಲಕರ್ಣಿ ಮುಂತಾದವರು ಪ್ರಮುಖರಾಗಿದ್ದಾರೆ.

ಇಂದೋರಿನ ಸಿತಾರ ರತ್ನ ಉಸ್ತಾದ ದಹಿಮತ ಖಾನ ೧೯೧೨ ರಲ್ಲಿ ಧಾರವಾಡಕ್ಕೆ ಬಂದು ಭಾರತೀಯ ಸಂಗೀತ ವಿದ್ಯಾಲಯವನ್ನು ಸ್ಥಾಪಿಸಿ ಇಲ್ಲಿ ಅನೇಕ ಜನ ಶಿಷ್ಯರನ್ನು ಸಿತಾರವಾದನದಲ್ಲಿ ತರಬೇತಿಗೊಳಿಸಿದರು. ಉಸ್ತಾದ ರಹಿಮತ ಖಾನರ ಮಕ್ಕಳಾದ ಪ್ರೊ. ಕರಿಂಖಾನರು ಸಿತಾರ ವಾದನದಲ್ಲಿ ಪ್ರಾಧ್ಯಾಪಕರಾಗಿ ಕರ್ನಾಟಕ ವಿಶ್ವವಿದ್ಯಾಲಯ ಸಂಗೀತ ಕಾಲೇಜಿನಲ್ಲಿ ಸೇವೆ ಸಲ್ಲಿಸಿದರು. ಇವರ ಮಕ್ಕಳಲ್ಲಿ ಉಸ್ತಾದ ಉಸ್ಮಾನ ಖಾನ, ಉಸ್ತಾದ ಬಾಲೇಖಾನ, ಹಮೀದ ಖಾನ, ಶ್ರೀ. ಛೋಟೆ ರಹೆಮತಖಾನ, ರಝುವಿ, ಶ್ರೀ ರಫಿಕಖಾನ, ಶ್ರೀ ಶಫಿಕ ಖಾನ ಇವರೆಲ್ಲರೂ ಸಿತಾರವಾದಕರಾಗಿ ಇವರ ಮಕ್ಕಳೂ ಕೂಡ ಈ ಪರಂಪರೆಯನ್ನು ಮುಂದುವರೆಸಿಕೊಂಡು ಹೊರಟಿದ್ದಾರೆ. ಈ ರೀತಿ ಅಸಂಖ್ಯಾತ ಕಲಾವಿದರ ಕೂಡುಗೆಯಿಂದ ಹಿಂದುಸ್ತಾನಿ ಸಂಗೀತ ಪರಂಪರೆಯು ಕರ್ನಾಟಕದಲ್ಲಿ ಐತಿಹಾಸಿಕ ಕಾಲದಿಂದ ಇಲ್ಲಿಯವರೆಗೂ ಅವ್ಯಾಹತವಾಗಿ ನಡೆದುಕೊಂಡು ಬಂದು ತನ್ನದೇ ಆದ ವೆಶಿಷ್ಟ್ಯತೆಯನ್ನು ಮೆರೆದಿದೆ.

**(ಬ) ತಬಲಾ ಉತ್ಪತ್ತಿ :**

ಕ್ರಮಬದ್ಧವಾದ ಗತಿಯಲ್ಲಿ ಒಂದು ವಿಶೇಷ ಸಮಯಾವಧಾನವಿದೆ ಇದನ್ನು ಲಯವೆಂದು ಹೆಸರಿಸುತ್ತೇವೆ. ಸಂಗೀತದಲ್ಲಿ ಸ್ವರ ಸಂಗೀತ, ವಾದ್ಯಸಂಗೀತ ಮುಖ್ಯವಾದವುಗಳಾಗಿದ್ದು ಇವುಗಳನ್ನು ರಂಗುಗೊಳಿಸಿ ಸಂಗೀತಕ್ಕೆ ಜೀವಾಳವಾಗಿರುವ ಲಯದ ನಿಯಂತ್ರಣ ಸಾಧಿಸುವ ವಾದ್ಯಗಳಲ್ಲಿ ತಬಲಾ ಒಂದಾಗಿದೆ. ಬಹು ಕಾಲದಿಂದಲೂ ಮೃದಂಗ ರೂಪದಲ್ಲಿ ಇದು ಉತ್ತರ ಹಿಂದೂಸ್ಥಾನದಲ್ಲಿ ಜನ್ಮ ಪಡೆದು ಕ್ರಮೇಣ ದಕ್ಷಿಣದ ಕಡೆಗೆ ಪ್ರಚಲಿತಗೊಂಡಿತು. ಕರ್ನಾಟಕದಲ್ಲೂ ಇದು ತನ್ನ ಮಹತ್ವಪೂರ್ಣ ಪಾತ್ರವನ್ನು ಸಾಧಿಸಿಕೊಂಡು ಬಂದಿದೆ. ತಬಲಾ ಚರ್ಮನಿರ್ಮಿತ ವಾದ್ಯವಾಗಿದ್ದು ಮೊಟ್ಟ ಮೊದಲು ಮೃದಂಗ ಕ್ರಮೇಣ

ಪಖವಾಜ, ಢೋಲಕ, ಮುಂತಾದ ರೂಪಗಳಲ್ಲಿ ಬದಲಾವಣೆ ಹೊಂದುತ್ತ ಈಗಿನ ಸುಧಾರಿತ ರೂಪದಲ್ಲಿ ನಿರ್ಮಾಣಗೊಂಡಿದೆ. ಸಂಗೀತದ ಜೀವಾಳವಾದ ಲಯಬದ್ಧತೆಯನ್ನು ಇದು ನಿಯಂತ್ರಣಗೊಳಿಸುವ ಮಹತ್ವದ ವಾದ್ಯವಾಗಿದೆ. ಆದ್ದರಿಂದ ಇದರ ಮಹತ್ವ ಸಂಗೀತ ಸಭೆಗಳಲ್ಲಿ, ಮಹತ್ವದ ಸಮಾರಂಭಗಳಲ್ಲಿ, ಆಕಾಶವಾಣಿ ದೂರದರ್ಶನಗಳಲ್ಲಿ ವ್ಯಾಪಿಸಿಕೊಂಡಿದೆ.

ತಬಲಾ ವಾದನ ಕಲೆಯು ಪೂರ್ವತಃ ಉತ್ತರ ಹಿಂದೂಸ್ತಾನದ ದಿಲ್ಲಿ ಘರಾಣೆಯಲ್ಲಿ ಹುಟ್ಟಿ ಬೆಳೆದು ಬಂದು. ಬೇರೆ ಎಲ್ಲೆಡೆ ಹಬ್ಬಿಕೊಂಡಿತು. ಹೀಗೆ ಬೆಳೆದುಬಂದ ಘರಾಣೆಗಳಲ್ಲಿ ಅಜರಾಡಾ, ಪೂರಬ, ಫರುಖಾಬಾದ, ಬನಾರಸ, ಪಂಜಾಬ, ಇವು ಮುಖ್ಯವಾದವು. ತಬಲಾವಾದನ ಕಲೆಯಲ್ಲಿ ಹೆಸರಾದ ಪೂರ್ವಕಾಲದ ವಿದ್ವಾನರ ಹಾಗೂ ಅವರ ಸಾಧನೆಗಳ ಬಗ್ಗೆ ಖಚಿತವಾದ ಮಾಹಿತಿಯ ಅಭಾವದಿಂದಾಗಿ ಈ ವಾದ್ಯದ ಹುಟ್ಟು ಮತ್ತು ಬೆಳವಣಿಗೆಯ ವಿಷಯ ನಿಗೂಢವಾಗಿಯೇ ಇದೆ. ಈ ಸಂಬಂಧದಲ್ಲಿ ಕೆಲವೊಂದು ಪೌರಾಣಿಕ ಕಥೆ ಪ್ರಾಚೀನ ದೇವಾಲಯಗಳಲ್ಲಿ ಕೆತ್ತನೆಗೊಂಡು ಮೂರ್ತಿಗಳ ಹಾಗೂ ಚಿತ್ರಗಳ ಆಧಾರದ ಮೇಲೆ ವಿಷಯ ಸಂಗ್ರಹಿಸಬೇಕಾಗುತ್ತದೆ. ತಬಲಾ ಹೋಲುವಂತಹ ವಾದ್ಯ ನುಡಿಸುವ ಮೂರ್ತಿಗಳು ಹಳೆಯ ದೇವಸ್ಥಾನಗಳಲ್ಲಿಯ ಶಿಲ್ಪಗಳಲ್ಲಿ ಕಂಡುಬರುತ್ತಿದ್ದು ಈ ವಾದ್ಯಗಳ ಅಸ್ತಿತ್ವಕ್ಕೆ ಸಾಕ್ಷಿಯಾಗಿ ನಿಂತಿವೆ. ಇಂಥಹ ದೇವಾಲಯಗಳು ಕೋನಾರ್ಕ, ಭುವನೇಶ್ವರ, ಅಮರಾವತಿ, ಬದಾಮಿ, ಹಂಪಿ, ಬೇಲೂರು ಹಳೇಬೀಡುಗಳಲ್ಲಿ ಇವೆ. ಕೆಲವೊಂದು ಗುಹೆಗಳಲ್ಲಿ ಕೆತ್ತಿದ ಶಿಲ್ಪಗಳಲ್ಲಿ ತಬಲಾ ಹೋಲುವಂತಹ ವಾದ್ಯವನ್ನು ಬಾರಿಸುತ್ತಿರುವ ಮೂರ್ತಿಗಳನ್ನು ಕಾಣಬಹುದಾಗಿದೆ. ಇಂತಹ ಶಿಲ್ಪಗಳು ಆಗಿನ ಜನಜೀವನದ ಪ್ರತೀಕವಾಗಿದ್ದು ಇವುಗಳ ಕಾಲ ಕ್ರಿಪೂ ೨೦೦ ರಿಂದ ೧೬ ನೇ ಶತಮಾನದವರೆದಿನದಾಗಿದೆ. "ಅತೀ ಪ್ರಾಚೀನ ಕಾಲಸೇ ಹೀ ಅನೇಕ ವಾದ್ಯ ಹಮಾರೆ ಸಾಮಾನ್ಯ ಜನ ಜೀವನಮೆ ಸಾಂಸ್ಕೃತಿಕ ಏವಂ ಕಲಾತ್ಮಕ ಪಕ್ಷೋಂಸೆ ಸಂಬಂಧಿತ ಹೈ. ಭುವನೇಶ್ವರ, ಕೋನಾರ್ಕ, ಅಮರಾವತಿ , ಬದಾಮಿ ಆದಿ ಹೈ ಜಿನಕಾ ಸ್ವರೂಪ ಆಜಕೆ ತಬಲೆ ಕೀ ಜೋಡೀ ಜೈಸಾ ಹೈ . ಯೆ ಗುಫಾವೊ ಲಗಭಗ ಈಸಾ ಪೂರ್ವ ೨೦೦ ವರ್ಷಸೆ ಲೇಕರ ಸೋಲಹವಿ ಶತೀ ಕಾಲ ಕಿ ಹೈ."[೧]

ಉತ್ತರ ಭಾರತದ ಗಾಯನ ಶೈಲಿಯಲ್ಲಿ ಖ್ಯಾಲ ಗಾಯನ ಶೈಲಿಯ ಪ್ರವೇಶವು ೧೪ನೇ ಶತಮಾನದಲ್ಲಿ ಪ್ರಾರಂಭವಾಗಿತ್ತು. ಆಗ ಪ್ರಚಲಿತವಿದ್ದ ಪಖವಾಜ ಇದು ಶೃಂಗಾರಮಯ ಹಾಗೂ ಮಧುರ ಸಂಗೀತಕ್ಕೆ ಅನುಕೂಲವಾಗಿರಲಿಲ್ಲ ಹೀಗಾಗಿ ಬೇರೆ ಒಂದು ಮಧುರ ವಾದ್ಯದ ಅವಶ್ಯಕತೆ ತಲೆದೋರಿತು. ಈ ಅವಶ್ಯಕತೆಯೇ ತಬಲಾ ವಾದ್ಯದ ಹುಟ್ಟು ಹಾಗೂ ಬೆಳವಣಿಗೆಗೆ ಕಾರಣವಾಯಿತು.

---

೧. ಗ್ರಂಥ "ಪಖವಾಜ ಓರ ತಬಲಾ ಕೆ ಘರಾನೆ ಏವಂ ಪರಮಪರಾಯೆ" ಡಾ ಆಬಾನ. ಈ. ಮೀಸ್ತ್ರಿ. ಪು೧೧೯/ ೨೦೦೦.

ತಬಲಾ ವಾದ್ಯವು ಹೇಗೆ ಮತ್ತು ಎಲ್ಲಿ ಜನ್ಮ ಗೊಂಡಿತು ಎಂದು ವಿಷಯವು ವಿದ್ವಾಂಸರಲ್ಲಿ ಇನ್ನೂ ಒಂದು ಪ್ರಶ್ನೆಯಾಗಿಯೇ ಉಳಿದಿದೆ.

ಈ ವಿಷಯದಲ್ಲಿ ಪೌರಾಣಿಕ ಆಧಾರಗಳು ಹೀಗಿವೆ "ಸ್ವಾಮಿ ಪ್ರಜ್ಞಾನಂದರವರು ತಬಲಾದ ಅಸ್ತಿತ್ವದ ಬಗ್ಗೆ ಪ್ರಾಚೀನ ದೇವಾಲಯಗಳಲ್ಲಿಯ ಶಿಲ್ಪ ಕಲಾ ಕೃತಿಗಳ ಅಧಾರದ ಮೇಲೆ ಸಿದ್ಧಪಡಿಸಲು ಪ್ರಯತ್ನಿಸಿದ್ದಾರೆ. ಇವರ ಹೇಳಿಕೆಯ ಮೇರೆಗೆ ಆಧುನಿಕ ತಬಲಾ ಪ್ರಾಚೀನ ಕಾಲದ ತ್ರಿಪುಷ್ಕರ ಇದರ ಊರ್ಧ್ವಕ ಮತ್ತು ಆಲಿಂಗ್ಯದ ಸುಧಾರಿತ ರೂಪವಾಗಿದೆ. ಇವರು ತಮ್ಮ ಪುಸ್ತಕದಲ್ಲಿ ಹೀಗೆ ಬರೆದಿದ್ದಾರೆ. ಪ್ರಾಚೀನ ಕಾಲದ ಭಾರತದಲ್ಲಿಯ ಕಲ್ಲಿನಲ್ಲಿ ಕೆತ್ತಿದ್ದ ನಾಟ್ಯವನ್ನು ಮಾಡುತ್ತಿರುವ ಶಿವನ ಮೂರ್ತಿಯ ಬದಿಯಲ್ಲಿ ಎರಡು ಚಿಕ್ಕದಾದ ತಾಳವಾದ್ಯಗಳು ಕಾಣಬರುತ್ತವೆ. ಈ ಚಿಕ್ಕ ತಾಳವಾದ್ಯಗಳು ಹಿಂದಿನ ಕಾಲದ ಪುಷ್ಕರ ವಾದ್ಯದ ಪ್ರತಿರೂಪಗಳಾಗಿವೆ. ೬/೭ ನೆಯ ಶತಮಾನದ ಭುವನೇಶ್ವರದ ಮುಕುಟೇಶ್ವರ ದೇವಾಸ್ಥಾನದಲ್ಲಿ ಕೆತ್ತನೆಗೊಂಡ ಮೂರು ತಾಳವಾದ್ಯದ ಪುಷ್ಕರಗಳು ಕಂಡುಬರುತ್ತವೆ. ಇನ್ನೂ ಮೂರು ಬಾದಾಮಿಯಲ್ಲಿ ಕಲ್ಲಿನಲ್ಲಿ ಕೊರೆದ ಆರನೇ ಶತಮಾನದ ಗವಿದೇವಾಲಯಗಳಲ್ಲಿವೆ. ಕೆಲವರ ಅಭಿಪ್ರಾಯದ ಮೇರೆಗೆ ಈ ತಾಳವಾದ್ಯಗಳ ಪೈಕಿ ಎರಡು ಅಡ್ಡವಾಗಿ ಬಾರಿಸುವ ಒಂದು ದೊಡ್ಡ ತಾಳವಾದ್ಯದ ಮುಖಗಳಾಗಿವೆ. ಮೂರನೇಯದು ಈಗಿನ ತಬಲಾದಂತೆ ಇತ್ತು. ಆಧುನಿಕ ತಬಲಾ ಮತ್ತು ಡಗ್ಗಾ ಬಹುಷಃ ಪ್ರಾಚೀನ ಕಾಲದ ಪುಷ್ಕರಗಳ ಆಧಾರದ ಅನುಕರಣೆಯಾಗಿವೆ.

"In the rock cut temples of different places of India, earved in different age, we find two drums of small size, engraved by the side of Siva Nataraja in dancing posture. Those drums are but the replicas of ancient 'pushkaras.' Three drums 'pushkaras' are also to be seen carved in the mukuteshwar temple of 6th-7th century A.D. at Bhuvaneshwar and the three others in the cave temple of Badami near Bombay of the 6th century A.D. Some are of opinion that two of these drums represent the two parts of a large drum, which used to be played horizontally and the third one was small like the modern 'Tabala.'

The modern 'Tabal' and Bayan were perhaps shaped in imitation of the ancient 'Pushkaras'."[೧]

---

೧. ಪಖವಾಜ ಔರ ತಬಲಾ ಕೆ ಘರಾನೆ ಏವಂ ಪರಂಪರಾಯೆ, ಲೇ. ಡಾ. ಅಬಾನ ಈ ಮೀಸ್ತ್ರಿ, ಪು.ಸಂ. ೧೧೫, ಪ್ರಕಾಶನ ೨೦೦೦.

ಕೆಲವರ ಪ್ರಕಾರ ಭರತಮುನಿಯ ಭರತನಾಟ್ಯಶಾಸ್ತ್ರದ ತಾಲಾಧ್ಯಾಯದಲ್ಲಿ ವಿವರಗೊಂಡ "ತ್ರಿಪುಷ್ಕರ"ವೇ ಮೂಲಾಧಾರವೆನಿಸಿದೆ. ಈ ತ್ರಿಪುಷ್ಕರದ ಆವಿಷ್ಕಾರದ ಬಗ್ಗೆ ಪೌರಾಣಿಕ ಕಥನವು ಹೀಗಿದೆ. ಮಳೆಗಾಲದ ಸಮಯದಲ್ಲಿ ಸ್ವಾತಿಮುನಿಯು ತಪಸ್ಸಿಗೆ ಕುಳಿತಾಗ ನೀರಿನ ಹನಿಗಳು ಕಮಲದ ಹೂವಿನ ಮೇಲೆ ಲಯಬದ್ಧವಾಗಿ ಬಿದ್ದು ಉತ್ಪನ್ನವಾದ ಶಬ್ಧದಿಂದ ಸ್ವಾತಿ ಮುನಿಯು ಪ್ರೇರಿತನಾಗಿ ತನ್ನ ಶಿಷ್ಯನಾದ ವಿಶ್ವಕರ್ಮನಿಗೆ ಈ ರೀತಿಯ ಶಬ್ದ ಉತ್ಪನ್ನವಾಗುವಂತಹ ಒಂದು ವಾದ್ಯವನ್ನು ರಚಿಸಲು ಆದೇಶಿಸಿದನು. ಆಗ ವಿಶ್ವಕರ್ಮನು ರಚಿಸಿದ ವಾದ್ಯವೇ "ತಿಪುಷ್ಕರ" ವಾಯಿತು. ಅದರಲ್ಲಿ ಮೂರು ಅಂಗಗಳಿದ್ದು ೧) ಆಂಕಿಕ ೨) ಆಲಿಂಗ್ಯ ೩) ಊರ್ಧ್ವಕ ಕಾಲಕ್ರಮೇಣ ಈ ಮೂರು ಅಂಗಗಳಲ್ಲಿ ಊರ್ಧ್ವಕ ಮತ್ತು ಆಲಿಂಗ್ಯ ವಾದ್ಯಗಳು ಮಾಯವಾಗಿ ಕೇವಲ ಆಂಕಿಕ ಮಾತ್ರ ಉಳಿಯಿತು. ಇದಕ್ಕೆ ಈಗಿನ ಮೃದಂಗವೆಂದು ಹೇಳಬಹುದು. ಮೃದಂಗದ ಉತ್ಪತ್ತಿಯ ಬಗ್ಗೆ ಇನ್ನೊಂದು ಪೌರಾಣಿಕ ಕಥನವು ಹೀಗಿದೆ. ಶಂಕರನು ತ್ರಿಪುರಾಸುರನೆಂಬ ಭಯಂಕರ ರಾಕ್ಷಸನನ್ನು ಸಂಹಾರಮಾಡಿದನಂತರ ತನ್ನ ಸಂತುಷ್ಟಿಯನ್ನು ನೃತ್ಯದ ಮೂಲಕ ವ್ಯಕ್ತಪಡಿಸುತ್ತಾನೆ. ಈ ನೃತ್ಯವು ಎಷ್ಟೊಂದು ಅದ್ಭುತವಾಗಿತ್ತೆಂದರೆ ಪೃಥ್ವಿಯೇ ಅಲ್ಲೋಲ ಕಲ್ಲೋಲವಾಗತೊಡಗಿತು. ಇದನ್ನು ಕಂಡು ಸೃಷ್ಟಿಕರ್ತನಾದ ಬ್ರಹ್ಮನು ಚಿಂತಿತಗೊಂಡು ಈ ಪ್ರಮಾದ ತಪ್ಪಿಸಲು ಮೃದಂಗದ ರಚನೆಯನ್ನು ಮಾಡಿ ಶಂಕರನ ನೃತ್ಯದ ಜೊತೆಗೆ ಈ ಮೃದಂಗ ನುಡಿಸಲು ಭಗವಾನ ಶಂಕರನ ಮಗನಾದ ಗಣೇಶನಿಗೆ ಪ್ರೇರಣೆ ನೀಡಿದನು. ಗಣೇಶನ ಮೃದಂಗ ವಾದನದಿಂದ ಪ್ರಭಾವಿತನಾದ ಶಂಕರನು ಲಯಬದ್ಧವಾಗಿ ಮೃದಂಗ ವಾದನದ ಜೊತೆಗೆ ನೃತ್ಯ ಮಾಡಹತ್ತಿದನು. ಆಗ ಪೃಥ್ವಿಯ ವಿನಾಶವನ್ನು ತಪ್ಪಿಸಿದಂತಾಯಿತು. ಹೀಗೆ ಮೃದಂಗದ ಉತ್ಪತ್ತಿಯ ಬಗ್ಗೆ ಪೌರಾಣಿಕ ಹಿನ್ನೆಲೆ ಇದೆ. ಭರತನ ನಾಟ್ಯಶಾಸ್ತ್ರದಲ್ಲಿಯೂ ಸಹ ತ್ರಿಪುಷ್ಕರ ವಾದ್ಯದ ಉಲ್ಲೇಖವಿದೆ. ಈ ವಾದ್ಯದ ಆಂಕಿಕ ಭಾಗದಿಂದ ಪರಿವರ್ತನೆಗೊಂಡ ವಾದ್ಯವೇ ಮೃದಂಗ. ಇನ್ನೊಂದು ಪೌರಾಣಿಕ ಆಧಾರ ಈ ರೀತಿಯಾಗಿದೆ. ಅವನದ್ಧ ವಾದ್ಯದ ವಿಕಾಸವು ಶಿವನ ಕೈಯಲ್ಲಿಯ ಡಮರುವಿನಿಂದ ಪ್ರಾರಂಭವಾಯಿತು. ಪಾಣಿನಿಯ ಅಷ್ಟಾಧ್ಯಾಯದ ಪ್ರಕಾರ ಶಿವನ ಡಮರುವಿನ ನಾದದಿಂದ ಸಂಸ್ಕೃತ ವರ್ಣಗಳ ಉತ್ಪತ್ತಿಯಾಯಿತು.

ಐತಿಹಾಸಿಕ ಆಧಾರದ ಮೇಲೆ ವಿಚಾರಿಸುವುದಾದರೆ ಆದಿಕಾಲದಲ್ಲಿ ಮಾನವನು ಭೂಮಿಯಲ್ಲಿ ಒಂದು ತೆಗ್ಗನ್ನು ತೋಡಿ ಅದರ ಮೇಲೆ ಪ್ರಾಣಿಗಳ ಚರ್ಮವನ್ನು ಹೊದಿಸಿ ಆ ಚರ್ಮದ ಮೇಲೆ ಆಘಾತ ಮಾಡಿದಾಗ ದೊಡ್ಡ ಧ್ವನಿಯು ಹೊರಟಿತು ಇದೇ "ಭೂಮಿದುಂದುಭಿ" ವಾದ್ಯವಾಯಿತು. ಭೂಮಿದುಂದುಭಿ ವಾದ್ಯವು ವೇದದಲ್ಲಿ ಕೂಡ

ಉಲ್ಲೇಖಿಸಲ್ಪಟ್ಟಿದೆ. ಭೂಮಿದುಂದುಭಿಯ ನಂತರ ಸುಧಾರಿತ ಅವನದ್ಧ ವಾದ್ಯವೆಂದರೆ "ದುಂದುಭಿ" ವಾದ್ಯ. ಈ ದುಂದುಭಿಯ ಉಪಯೋಗವು ಆಗಿನ ಕಾಲದಲ್ಲಿ ಶತ್ರುಗಳನ್ನು ಭಯಭೀತರನ್ನಾಗಿ ಮಾಡಲು ಯುದ್ಧ ಭೂಮಿಯಲ್ಲಿ ಉಪಯೋಗಿಸಲಾಗುತ್ತಿತ್ತು. ಇದಲ್ಲದೆ ವಿಜಯೋತ್ಸವ ಕಾಲದಲ್ಲಿ ಕೂಡ ಇದನ್ನು ಉಪಯೋಗಿಸುತ್ತಿದ್ದರು.

ದುಂದುಭಿಯ ನಂತರ ಬಳಕೆಯಲ್ಲಿದ್ದ ಅವನದ್ಧ ವಾದ್ಯಗಳೆಂದರೆ ನಕ್ಕಾ, ಸಂಬಲ, ದುರ್ದರ, ದುಕ್ಕಡ ಹೀಗೆಲ್ಲ ಇದ್ದು ಇವುಗಳ ಸುಧಾರಿತ ರೂಪದಲ್ಲಿ ಮೃದಂಗ ಹಾಗೂ ಪಖವಾಜಗಳು ಉತ್ಪತ್ತಿಯಾದವು. ಮೃದಂಗದಿಂದ ಸುಧಾರಿಸಿದ ವಾದ್ಯವಾದ ಪಖವಾಜ ಇದು ಮೃದಂಗದಿಂದ ಬಹಳ ಅಂತರವಿಲ್ಲದ ಕಾರಣ ಈ ಒಂದೇ ವಾದ್ಯಕ್ಕೆ ಉತ್ತರ ಭಾರತದಲ್ಲಿ ಪಖವಾಜವೆಂದು, ದಕ್ಷಿಣಭಾರತದಲ್ಲಿ ಇದಕ್ಕೆ ಮೃದಂಗವೆಂದು ಕರೆಯಲಾಗುತ್ತಿತ್ತು. ಆಕಬರ ಕಾಲದ ಕಲಾಕಾರರನ್ನು ಹಾಗೂ ವಾದ್ಯಗಳನ್ನು ವರ್ಣನೆಮಾಡುತ್ತ ಆರ್ಚಾರ್ಯ ಬೃಹಸ್ಪತಿಯವರು ತಮ್ಮ ಸಂಗೀತ ಚಿಂತಾಮಣಿಯಲ್ಲಿ ಪಖವಾಜದ ಉಲ್ಲೇಖವನ್ನು ಮಾಡಿದ್ದಾರೆ.

ಇಲ್ಲಿಯವರೆಗೆ ತಬಲಾ ವಾದ್ಯದ ಉತ್ಪತ್ತಿಗೆ ಮೂಲತಃ ಪ್ರೇರಕ ವಾದ್ಯಗಳಾದ ಭೂಮಿದುಂದುಭಿ, ತ್ರಿಪುಷ್ಕರ, ಮೃದಂಗ, ಪಖವಾಜ ಇವುಗಳ ಬಗ್ಗೆ ವಿವರಿಸಲಾಯಿತು. ಇನ್ನು ತಬಲಾ ಉತ್ಪತ್ತಿಯನ್ನು ಕುರಿತು ಹೇಳುವದಾದರೆ ಉತ್ತರ ಭಾರತೀಯ ಸಂಗೀತದಲ್ಲಿ ಇದು ಪ್ರಚಲಿತ ಪ್ರಸಿದ್ಧ ವಾದ್ಯವಾಗಿದ್ದು, ಇವತ್ತಿನ ದಿವಸದಲ್ಲಿ ಎಲ್ಲ ಪ್ರಕಾರದ ಸಂಗೀತದ ಜೊತೆ ತಬಲಾ ಸಾಥಿಯು ಅನಿವಾರ್ಯವಾಗಿದೆ. ಅಂದರೆ ಹಿಂದುಸ್ತಾನಿ ಸಂಗೀತ, ಭಾವಗೀತೆ, ಭಕ್ತಿಗೀತೆ, ನೃತ್ಯ(ಕಥಕ), ಗಜಲ್, ಠುಮ್ರಿ, ಟಪ್ಪಾ ತಂತು ವಾದ್ಯಗಳು (ಹಿಂದುಸ್ತಾನಿ), ಮುಂತಾದವುಗಳ ಜೊತೆಗೆ. ಇದಕ್ಕೆ ಪ್ರಬಲಕಾರಣವೇನೆಂದರೆ ಚರ್ಮವಾದ್ಯಗಳ ಎಲ್ಲಾ ಅವಶ್ಯಕ ಗುಣಗಳು ತಬಲಾದಲ್ಲಿ ಕಂಡುಬರುತ್ತವೆ. ಆದ್ದರಿಂದ ತಬಲಾ ವಾದ್ಯದ ಸ್ಥಾನವು ಸಂಗೀತ ಕ್ಷೇತ್ರದಲ್ಲಿ ಬಹಳ ಪ್ರಾಮುಖ್ಯತೆ ಹೊಂದಿದೆ.

ಕೆಲವು ಸಂಗೀತಜ್ಞರ ಅಭಿಪ್ರಾಯದಂತೆ ೧೨೭೩ನೇ ಇಸ್ವಿಯಿಂದ ೧೩೨೫ನೇ ಇಸ್ವಿ ಕಾಲದಲ್ಲಿ ದಿಲ್ಲಿಯ ದರಬಾರದ ಕಲಾಕಾರ ಅಮೀರಖುಸ್ರೋ ತಬಲಾದ ಸಂಶೋಧಕನೆಂದು ಉರ್ದು ಭಾಷೆಯಲ್ಲಿ ಬರೆದ ಪುಸ್ತಕ "ಮವುದನ್ ಉಲ್-ಮುಸಿಕಿ" ಎಂಬುವದರಲ್ಲಿ ಉಲ್ಲೇಖಗೊಂಡಿದೆ. ಅಮೀರಖುಸ್ರೋ ಇವನು ಅಲ್ಲಾವುದ್ದೀನ್ ಖಿಲ್ಜಿಯ ದರಬಾರದಲ್ಲಿ ವಿಶಿಷ್ಟ ಕಲಾಕಾರನಾಗಿದ್ದು ಪಾರ್ಸಿ ಹಾಗೂ ಭಾರತೀಯ ಸಂಗೀತಗಳ ಪಂಡಿತನಾಗಿದ್ದನು. ಅಲ್ಲದೇ

ಈ ಎರಡೂ ಸಂಗೀತಗಳ ಸಮನ್ವಯಕ್ಕೆ ಕಾರಣೀಭೂತನಾಗಿದ್ದನು. ಅಬುಲ್ ಫಜಲ್ ತನ್ನ ಗ್ರಂಥ ಐನ್-ಎ-ಅಕಬರಿ ಯಲ್ಲಿ ಅಕಬರನ ಕಾಲದ ಮೂವತ್ತಾರು ಸಂಗೀತಗಾರರ ಹೆಸರುಗಳನ್ನು ಬರೆದಿದ್ದು ಅದರಲ್ಲಿ ತಬಲಾವಾದಕರ ಅಥವಾ ತಬಲಾ ವಾದ್ಯದ ಉಲ್ಲೇಖವಿಲ್ಲ. ಮುಂದೆ ಮಹಮದ ಶಹಾ ರಂಗೀಲೆ ಇವನ ಕಾಲಮಾನದವರೆಗೂ ಅಂದರೆ ೧೭೧೯ ರಿಂದ ೧೭೪೮ ರವರೆಗೆ ಯಾವ ಪುಸ್ತಕದಲ್ಲಿಯೂ ತಬಲಾ ಅಥವಾ ತಬಲಾ ವಾದಕರ ಮಾಹಿತಿಯು ಲಭ್ಯವಿಲ್ಲ.

"ತುಬುಲ್" ಇದು ಫಾರಸಿ ಶಬ್ದವಾಗಿದೆ. ೧೫ನೇ ಶತಮಾನದ ಹುಮಾಯೂನನ ಕಾಲದಲ್ಲಿ ತಬಲೆ-ಅದಲ್ ಎಂಬುದೊಂದು ವಾದ್ಯವಿತ್ತು. ಇದರಿಂದ ಮುಸಲ್ಮಾನರ ರಾಜ್ಯದ ಕಾಲದಲ್ಲಿ ತಬಲಾ ಶಬ್ದವು ಭಾರತದಲ್ಲಿ ಬಂದಿರಬಹುದಾಗಿದೆ. ಹುಮಾಯೂನನಿಗಿಂತ ಮೊದಲು ತಬಲೆಯು ನಗಾರಿಯ ರೂಪದಲ್ಲಿತ್ತು. ಅಂದಾಗ ೧೩ನೇ ಶತಮಾನದ ಅಮೀರ ಖುಸ್ರೋವಿಗೂ ತಬಲಾ ಶೋಧಕ್ಕೂ ಹೊಂದಿಕೆಯಾಗುವ ಬಗೆ ಹೇಗೆ ಎಂದು ತಿಳಿಯದು."[೧]

ಹಿಂದೂ ಸಂಸ್ಕೃತಿಯ ಪುರಾಣ ಕಾಲದಲ್ಲಿ ಎರಡು ಭಿನ್ನಧ್ವನಿಯುಳ್ಳ ನಗಾಡಾಗಳ ಹೆಸರುಗಳು ದೊರೆಯುತ್ತವೆ. ಕಾಲಿಕಾ ಪುರಾಣದ ಪ್ರದೋಷ ಪುಜಾ ವಿಧಾನದಲ್ಲಿ ತಾಂಡವ ನೃತ್ಯ ತಂತ್ರದ ಏಳನೆ ಪಟಲದಲ್ಲಿ ಸಂಬಲವಾದ್ಯದ ಉತ್ಪತ್ತಿಯ ಬಗ್ಗೆ ವಿವರಿಸಲಾಗಿದೆ. ಸಂಬಲ ವಾದ್ಯವು ತಾಲದ ಮಹೂರ್ತ ರೂಪವನ್ನು ತೋರುವದಾಗಿದೆ. ಸಂಬಲ ವಾದ್ಯವನ್ನು ಬೆತ್ತದ ಗುಣಿಗಳಿಂದ ಬಾರಿಸುವ ವ್ಯತ್ಯಾಸವನ್ನುಳಿದರೆ ತಬಲಾ ಹಾಗೂ ಸಂಬಲ ವಾದ್ಯಗಳು ಒಂದೇ ಬಗೆಯಾಗಿವೆ.

"ಆಚಾರ್ಯ ಕೈಲಾಶ ಚಂದ್ರದೇವ ಬೃಹಸ್ಪತಿ ಹಾಗೂ ರಶೀದ ಮಲಿಕ ಇವರ ಉರ್ದು ಪುಸ್ತಕ "ಹಜರತ ಅಮೀರ ಖುಸ್ರೋಕಾ ಇಲಮೇ ಮುಸಿಕಿ ಔರ ದುಸರೆ ಮುಲಾಕಾತ" ಈ ಪುಸ್ತಕದ ೧೧೧ನೇ ಪುಟದಲ್ಲಿಯ "ಸಂಗೀತ ಚಿಂತಾಮಣಿ" ಯಲ್ಲಿ ಹೀಗೆ ಬರೆದಿದೆ. ಹನ್ನೊಂದನೇ ಶತಮಾನದ ಆರಂಭದಲ್ಲಿ ತಬಲಾದ ಬಳಕೆಯು ಇಲ್ಲಿ ಆಗಿತ್ತು."ಹಜರತ್ ಅಮೀರ ಖುಸ್ರೋ ಕೆ ಜನ್ಮ ಕೆ ಸೈಕಡೋ ವರ್ಷ ಪಹಲೇ ತಬಲಾ ಭಾರತ ಮೇ ಥಾ.

ಅನುವಾದ : ಹಜರತ ಅಮೀರ ಖುಸ್ರೋ ಹುಟ್ಟುವದಕ್ಕಿಂತ ನೂರಾರು ವರ್ಷ ಮೊದಲು ತಬಲಾ ಭಾರತದಲ್ಲಿತ್ತು."[೨] ತಬಲಾದ ಆವಿಷ್ಕಾರಕ್ಕೆ ಖುಸ್ರೋನ ಯಾವ ಸಂಬಂಧವು ಇಲ್ಲ. ನಮಗೆ ತಬಲಾ ಎಂಬುದು ಪಾರ್ಸಿ ಶಬ್ದವೆಂದು ಇಷ್ಟೇ ಗೊತ್ತು. ಕೊನೆಯ ಮೊಗಲ ಬಾದಶಹಾ ಶಹಾ ಆಲಂನ ಕಾಲದವರೆಗೆ ಯಾವದೇ ತಬಲಾ ವಾದಕನ ಹೆಸರು ನಮಗೆ ಸಿಗುವದಿಲ್ಲ ಆದ್ದರಿಂದ ಹಜರತ ಅಮೀರ ಖುಸ್ರೋ ಆವಿಷ್ಕಾರಕರ್ತ ಅಲ್ಲವೆಂಬ ರಶೀದ ಮಲಿಕನ ಹೇಳಿಕೆಗೆ ನಾವು ಸಮ್ಮತಿಸುತ್ತೇವೆ.

---

೧. ಗ್ರಂಥ "ತಬಲಾ ಶಾಸ್ತ್ರ ವಿಶಾರದ", ಪ್ರಾ. ರಾಜೀವ ಪುರಂದರ. ಪು.ಸಂ. ೨೫, ಪ್ರಕಾಶನ ೧೯೬೯.

೨. ಗ್ರಂಥ "ಫಖವಾದ ಔರ ತಬಲಾಕೆ ಘರಾಣೆ ಏವಂ ಪರಂಪರಾಯೆ", ಲೇ. ಡಾ. ಆಬನ್ ಇ. ಮೀಸ್ತ್ರಿ ಪು. ೧೧೪, ೧೧೫

ಮಹಮ್ಮದ ಕರಾಂ ಇಮಾಮ ಇವರು ಬರೆದ ಪ್ರಕಾರ ಹದಿಮೂರನೇಯ ಶತಾಬ್ದಿಯ ಪೂರ್ವದಲ್ಲಿಯೂ ಭಾರತದಲ್ಲಿ ತಬಲಾ ಅಸ್ತಿತ್ವದಲ್ಲಿತ್ತು. ಸುಲ್ತಾನ ಗಯಾಸುದ್ದೀನ ಬಲಬನನ ದರಬಾರದಲ್ಲಿ ಕಲಾಕಾರರು ನುಡಿಸುತ್ತಿದ್ದ ತಾಲವಾದ್ಯವು ಈಗಿನ ತಬಲಾ ಜೋಡಿಗೆ ಬಹಳ ಹೋಲುತ್ತಿತ್ತು. ಅವುಗಳಲ್ಲಿಯ ಅಂತರವೆಂದರೆ ಕೇವಲ ಆ ಕಾಲದ ತಾಳ ವಾದ್ಯಗಳಲ್ಲಿ ಕರಣಿ(ಶಾಹಿ) ಇರುತ್ತಿದ್ದಿಲ್ಲ.

"ಆಜಚ್ಯಾ ತಬಲ್ಯಾಚಾ ಉಗಮ ಇಸ್ವಿಸನ್ ೧೨೧೦ ತೆ ೧೨೪೧ ಕಿವಾ ತ್ಯಾಂಚಾ ಕಾಹಿ ವರ್ಷಪೂರ್ವಿ ಝಾಲಾ ಅಸಣ್ಯಾಚಿ ಹಿ ಶಕ್ಯತಾ ಆಹೆ.

ಅನುವಾದ : ಶ್ರೀ ಅರವಿಂದ ಮುಳಗಾಂವಕರ ಇವರು ತಮ್ಮ ಮರಾಠಿ ಪುಸ್ತಕ "ತಬಲಾ" ಇದರಲ್ಲಿ ಈಗಿನ ತಬಲಾ ಉಗಮ ಇಸ್ವಿ ೧೨೧೦ರಿಂದ ೧೨೪೧ ಅವಧಿಯ ಎಷ್ಟೋ ವರ್ಷ ಪೂರ್ವದಲ್ಲಿಯೇ ಆಗಿರುವ ಸಾಧ್ಯತೆ ಇದೆ. ಎಂದು ಹೇಳಿದ್ದಾರೆ."[೧]

ಈಗಿನ ಅತ್ಯಂತ ಪ್ರಚಲಿತವಾದಂತಹ ತಬಲಾ ವಾದ್ಯವು ಸುಮಾರು ೧೭ನೇ ಶತಮಾನಕ್ಕಿಂತ ಪೂರ್ವದಲ್ಲಿ ಸಿಗಲಿಲ್ಲವಾದರೂ ಭಾರತದೇಶದ ಬೇರೆ ಬೇರೆ ಭಾಗಗಳಲ್ಲಿ ಪುರಾತನ ಶಿಲ್ಪ ಕಲೆಗಳಲ್ಲಿ ತಾಳವಾದ್ಯದ ಮೂರ್ತಿಗಳು ತಬಲಾಕ್ಕೆ ಹೋಲುವ ವಾದ್ಯವನ್ನು ಹಿಡಿದಿರುವದು ಸಾಕಷ್ಟು ಕಲ್ಲಿನ ಗುಹೆಗಳಲ್ಲಿ ಕಂಡುಬಂದಿದೆ. ಅತೀ ಪ್ರಾಚೀನ ಕಾಲದಿಂದಲೇ ಅನೇಕ ವಾದ್ಯಗಳು ಸಾಮಾನ್ಯ ಜನ ಜೀವನದಲ್ಲಿ ಸಾಂಸ್ಕೃತಿಕ ಹಾಗೂ ಧಾರ್ಮಿಕ ಪ್ರಸಂಗಗಳಲ್ಲಿ ಕಲಾತ್ಮಕವಾಗಿ ಉಪಯೋಗವಾಗುತ್ತಲೇ ಬಂದಿವೆ.

ತಬಲಾದ ಉತ್ಪತ್ತಿಯು ಎಲ್ಲಿಯಾಯಿತು ಹೇಗೆ ಆಯಿತು ಎಂಬ ಪ್ರಶ್ನೆ ತಬಲಾ ವಿದ್ವಾಂಸರಿಗೆ ಇವತ್ತಿನವರೆಗೆ ಒಂದು ಸಮಸ್ಯೆಯಾಗಿಯೇ ಉಳಿದಿದೆ. ತಬಲಾ ಉತ್ಪತ್ತಿ ಕುರಿತು ಅನೇಕ ಅಭಿಪ್ರಾಯಗಳು, ಮತ ಬೇಧಗಳು ಇವೆ. ಕೆಲವು ವಿದ್ವಾಂಸರ ಮತಾನುಸಾರ ತಬಲಾ ಉತ್ಪತ್ತಿಯು ಪಂಜಾಬ ಪ್ರಾಂತದಲ್ಲಿ ಬಳಕೆಯಲ್ಲಿದ್ದ 'ದುಕ್ಕಡ' ವೆಂಬ ವಾದ್ಯದಿಂದಾಯಿತು. ದುಕ್ಕಡದ ಅರ್ಥವು ಎರಡು ಎಂದು. ಅದರಲ್ಲಿ ವಾದ್ಯ ಸಹಿತ ಎರಡು ಇದ್ದು ತಬಲಾ ಡಗ್ಗಾಗಳ ಹೋಲಿಕೆಗಳಾಗಿವೆ. ತಬಲಾ ಇದು ದುಕ್ಕಡದ ಸುಧಾರಿತ ವಾದ್ಯವೆಂದು ಹೇಳಬಹುದು. ಕೆಲವರು ಪ್ರಾಚೀನ ಅವನದ್ಧ ವಾದ್ಯವಾದ ದುರ್ದರ ಮತ್ತುನಕ್ಕಾ ಇವುಗಳ ಸಂಬಂಧವನ್ನು ತಬಲಾದ ಜೊತೆಗೆ ಕಲ್ಪಿಸಿರುತ್ತಾರೆ.

ತಾಲಪ್ರಕಾಶದಲ್ಲಿ ಶ್ರೀ ಭಗವತ್ ಶರಣ ಶರ್ಮಾ ಅವರು ವಿವರಿಸಿದ ಪ್ರಕಾರ ಪಾಶ್ಚಾತ್ಯ ವಿದ್ವಾನ್ ಸ್ಟ್ರಾತ್ಯ ಬೋ ಹೇಳಿದಂತೆ ಏಷ್ಯಾ ಖಂಡದ ಜಂಗಲಿ ಜನರಲ್ಲಿ 'ನಬಲಾ' ಎಂಬ ವಾದ್ಯವು

---

೧. ಗ್ರಂಥ "ಫಖವಾದ ಔರ ತಬಲಾಕೆ ಘರಾಣೆ ಏವಂ ಪರಂಪರಾಯೆ", ಲೇ. ಡಾ. ಆಬನ್ ಇ. ಮೀಸ್ತ್ರಿ ಪು. ೧೧೫.

ಪ್ರಚಾರದಲ್ಲಿತ್ತು. ಮುಂದೆ ಅದೇ ಪರಿವರ್ತನೆಗೊಂಡು ತಬಲಾ ಆಗಿರಬಹುದು ಎಂದು ಅಭಿಪ್ರಾಯ ಪಟ್ಟಿದ್ದಾರೆ. 'ತಾಲ ಪ್ರಕಾಶ' ಪ್ರಸ್ತಾವನೆಯಲ್ಲಿ ವಿವರ ಗೊಂಡಂತೆ ಪಂಡಿತ ಕಿಶನ್ ಮಹಾರಾಜ ಹೀಗೆ ಬರೆದಿದ್ದಾರೆ. ಪ್ರಸಿದ್ಧ ಢೋಲಕಕಾರ ಖಬ್ಬೇ ಹುಸೇನನು ಮತ್ತೊಬ್ಬ ಖ್ಯಾತ ಮೃದಂಗ ವಾದಕ ಕುದುವ ಸಿಂಹನ ಜೊತೆಗೆ ಸ್ಪರ್ಧೆಗೆ ಇಳಿದಾಗ ಕಬ್ಬೇ ಹುಸೇನನು ಆ ಸ್ಪರ್ಧೆಯಲ್ಲಿ ಸೋತನು. ಆಗ ಕುದುವುಸಿಂಹನು ಖಡ್ಗದಿಂದ ಖಬ್ಬೇ ಹುಸೇನನ ಬಲಗೈ ಬೆರಳುಗಳನ್ನು ಕತ್ತರಿಸಿದನು. ನಂತರ ಸೋತ ಖಬ್ಬೇ ಹುಸೇನ ಎಡಗೈಯಿಂದ ಅಭ್ಯಾಸ ಮಾಡಿ ಮಧುರವಾದ ಬೋಲುಗಳನ್ನು ಸೃಷ್ಟಿಸಿದನು. ಈ ಮಧುರ ಬೋಲುಗಳನ್ನು ಕೇಳಿ ಕುದುವಸಿಂಹ ಅತ್ಯಂತ ಸಂತೋಷಗೊಂಡನು. ನಂತರ ಖಬ್ಬೇ ಹುಸೇನನು ಮೃದಂಗವನ್ನು ನಡುವೆ ಕತ್ತರಿಸಿ ಆ ಭಾಗಗಳನ್ನು ಎಬ್ಬಿಸಿ ನಿಲ್ಲಿಸಿದನು. ಅವುಗಳನ್ನು ನುಡಿಸಿದಾಗಲೂ ಆ ಎರಡೂ ಭಾಗಗಳು ಧ್ವನಿ ಕೊಟ್ಟವು ಇದಕ್ಕೆ ಹಿಂದಿಯಲ್ಲಿ 'ತಬ್ಬಿ ಬೋಲಾ' ಎಂದರು. ಈ ಶಬ್ದಗಳೇ ಪರಿಷ್ಕರಗೊಂಡು ತಬಲಾ ಆಗಿರಬಹುದೆಂದು ಪ್ರತೀತಿ.

ತಬಲಾದ ಆವಿಷ್ಕಾರದಲ್ಲಿ ಮುಸ್ಲಿಂರ ಪ್ರಭಾವವು ಸಾಕಷ್ಟು ಕಂಡು ಬಂದಿದ್ದು ಸುಮಾರು ೧೭ನೇ ಶತಮಾನದಲ್ಲಿ ಉಸ್ತಾದ ಸುಧಾರ ಖಾನ ದಾಡಿ ಈ ಸಂಬಂಧದಲ್ಲಿ ಹೆಸರಿಸಿದ್ದಾನೆ. ಉಸ್ತಾದ ಸುಧಾರ ಖಾನ ಡಾಡಿಯು ಮೂಲತ: ಪಖವಾಜವಾದಕನಿದ್ದು ಪಖವಾಜ ವಾದನ ಸ್ಪರ್ಧೆಯಲ್ಲಿ ಹಲವಾರು ಸಾರಿ ಸೋಲನ್ನು ಅನುಭವಿಸಿ ಬೇಸತ್ತು ಪಖವಾಜ ಬಾರಿಸುವದನ್ನು ಬಿಟ್ಟನು. ನಂತರ ಕಾಲ ಕಳೆದಂತೆ ಅವನ ಕಲೆಯು ಅವನಿಗೆ ಸುಮ್ಮನೆ ಕುಳಿತುಕೊಳ್ಳಲು ಕೊಡದ ಕಾರಣ ಉಸ್ತಾದ ಸುಧಾರಖಾನ ಡಾಡಿಯು ಪಖವಾಜ ವಾದ್ಯವನ್ನು ಇಬ್ಭಾಗಿಸಿ ಪಖವಾಜದ ಆ ಭಾಗಗಳನ್ನು ಎಬ್ಬಿಸಿ ನಿಲ್ಲಿಸಿ ಅವುಗಳ ಮೇಲೆಯೇ ಪಖವಾಜದ ಬೋಲುಗಳನ್ನು ನುಡಿಸಿದನು. ಹೀಗೆ ಇಬ್ಭಾಗವಾದ ಪಖವಾಜ ತಬಲಾ ಸ್ವರೂಪದಲ್ಲಿ ಮಾರ್ಪಾಟು ಹೊಂದಿತ್ತು. ಈ ತಬಲಾದ ಮೇಲೆ ಪಖವಾಜ ಬೋಲುಗಳನ್ನು ಅಳವಡಿಸಿ ಅನೇಕ ಹೊಸ ರಚನೆಗಳನ್ನು ಉಸ್ತಾದ ಸುಧಾರಖಾನ ಡಾಡಿಯು ಸೃಷ್ಟಿಸಿದನು. ಈತನು ದಿಲ್ಲಿಯ ನಿವಾಸಿಯಾಗಿದ್ದರಿಂದ ಈ ಘರಾಣೆಗೆ "ದಿಲ್ಲಿ" ಘರಾಣೆ ಎಂದು ಹೆಸರಿಡಲಾಯಿತು ಮತ್ತು ಈ ಘರಾಣೆಯ ತಬಲಾ ವಿಕಾಸದ ಕ್ರಾಂತಿ ಪುರುಷನೆಂದು ಹೇಳಬಹುದು.

ಹೀಗೆ ಈ ಎಲ್ಲಾ ದೃಷ್ಟಾಂತಗಳನ್ನು ನೋಡಿದಾಗ ಆಯಾ ಕಾಲದ ಸಂಗೀತಜ್ಞರ ಅಭಿಪ್ರಾಯಗಳನ್ನು ಅವಲೋಕಿಸಿದರೆ ಅವನದ್ಧ ವಾದ್ಯವು ಜನ ಜೀವನದ ಜೊತೆಜೊತೆಗೆ ಬೆಳೆದು ಬಂದು ಕಾಲಕಾಲಕ್ಕೆ ರೂಪದಲ್ಲಿ ಬದಲಾವಣೆಯಾಗುತ್ತ ತಬಲಾ ಉತ್ಪತ್ತಿಯು ಸಾಧ್ಯವಾಯಿತು. ಆದರೆ ನಿಶ್ಚಿತವಾಗಿ ತಬಲಾ ಆವಿಷ್ಕಾರದ ದಿನ ಹೇಳಲು ಸಾಧ್ಯವಾಗಿಲ್ಲ. ಒಂದು ವಿಚಾರ ಮಾತ್ರ ಸಮಂಜಸವಾದುದೆಂದರೆ ಖ್ಯಾಲ ಗಾಯನದ ಜೊತೆಗೆ ತಬಲಾ ಉತ್ಪತ್ತಿಯಾಗಿದ್ದು ಕಾಲ ಕಾಲಕ್ಕೆ

ಸುಧಾರಣೆಗೊಳ್ಳುತ್ತ ಬಂದಿದೆ.

**ಕರ್ನಾಟಕದಲ್ಲಿ ತಬಲಾ ಪರಿಸರ:**

ಈ ಅಧ್ಯಾಯದಲ್ಲಿ ತಬಲಾ ವಾದನ ಕಲೆಯು ಉತ್ತರದಿಂದ ಈ ಕರ್ನಾಟಕಕ್ಕೆ ಯಾವ ರೀತಿ ಬಂದಿತು ಮತ್ತು ಇಲ್ಲಿಯ ತಬಲಾ ಪರಿಸರದ ಬಗ್ಗೆ ಈ ಮುಂದೆ ಪ್ರಸ್ತುತ ಪಡಿಸಲಾಗಿದೆ.

೧೯ನೇ ಶತಮಾನದ ಪ್ರಾರಂಭದಲ್ಲಿ ಕರ್ನಾಟಕದಲ್ಲಿ ಹಿಂದೂಸ್ತಾನಿ ಸಂಗೀತವೆಂದರೆ ಪರಿಚಯವೇ ಇಲ್ಲದ ಪರಿಸ್ಥಿತಿ ಇತ್ತು, ಕರ್ನಾಟಕ ಸಂಗೀತವೇ ಪ್ರಧಾನವಾಗಿತ್ತು ಪಂಡಿತ ಬಾಲಕೃಷ್ಣ ಬುವಾ ಈಚಲಕರಂಜಿಕರ ಇವರು ಗ್ವಾಲ್ಹೇರ ಘರಾಣೆಯ ಶ್ರೇಷ್ಠ ಸಂಗೀತಗಾರರಾಗಿದ್ದರು. ಅವರು ಹಾಗೂ ಅವರ ಶಿಷ್ಯವೃಂದದಿಂದ ಉತ್ತರ ಕರ್ನಾಟಕದಲ್ಲಿ ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತವು ಪ್ರಸಾರಗೊಂಡಿತು. ಮೈಸೂರು ಅರಸರ ಆಸ್ಥಾನದಲ್ಲಿ ವಾರ್ಷಿಕೋತ್ಸವ ಮತ್ತು ದಸರಾ ಮುಂತಾದ ಕಾರ್ಯಕ್ರಮಗಳಿಗೆ ಮೈಸೂರು ಮಹಾರಾಜರುಗಳಾದ ನಾಲ್ವಡಿ ಕೃಷ್ಣರಾಜ ಒಡೆಯರ ಹಾಗೂ ಜಯಚಾಮರಾಜ ಒಡೆಯರ ಇವರು ಉತ್ತರದಿಂದ ಹಿಂದೂಸ್ತಾನಿ ಸಂಗೀತ ಕಲಾವಿದರನ್ನು ಆಮಂತ್ರಿಸಿ ಸಂಗೀತದ ಸವಿಯನ್ನು ತಾವು ಆಸ್ವಾದಿಸುವುದಲ್ಲದೆ ಜನ ಸಾಮಾನ್ಯರೂ ಕೇಳಿ ಆನಂದಿಸುವ ಸುಸಂಧಿ ಕಲ್ಪಿಸಿಕೊಡುತ್ತಿದ್ದರು. ಈ ರೀತಿ ಕರ್ನಾಟಕದಲ್ಲಿ ಹಿಂದೂಸ್ತಾನಿ ಸಂಗೀತದ ಬಗ್ಗೆ ಅಭಿರುಚಿ ಬೆಳೆದು ಬರುವುದಕ್ಕೆ ಮೈಸೂರು ಅರಸರ ಪಾತ್ರ ಹಿರಿಯದಾಗಿದ್ದು ಉಸ್ತಾದ ನತ್ಥನ ಖಾನ್, ಉಸ್ತಾದ ಹಫೀಜ ಅಲಿ ಖಾನ್, ಉಸ್ತಾದ ಫಯಾಜ ಖಾನ, ಉಸ್ತಾದ ವಿಲಾಯತ ಹುಸೇನ ಖಾನ, ಇನಾಯತ ಖಾನ, ಉಸ್ತಾದ ಅಬ್ದುಲ ಕರಿಂ ಖಾನ್ ಮುಂತಾದ ಹೆಸರಾಂತ ಹಿಂದೂಸ್ತಾನಿ ಸಂಗೀತ ಕಲಾವಿದರನ್ನು ತಮ್ಮ ದರ್ಬಾರಿನ ಗವಾಯಿಗಳೆಂದು ನೇಮಿಸಿಕೊಂಡು ಮೈಸೂರು ಅರಸರು ಆ ಕಲಾವಿದರನ್ನು ಗೌರವಿಸಿದರು. ನಾಲ್ವಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ ಉಸ್ತಾದ ಮುರಾದ ಖಾನ( ಬೀನಕಾರ) ಮಹಾ ಗಾಯಕ ಹಫೀಜ ಅಲಿ ಖಾನ, ಸಿತಾರವಾದನ ಖ್ಯಾತಿಯ ಬರಖತ್ತುಲ್ಲಾ ಖಾನ ಇವರೆಲ್ಲರೂ ಮೈಸೂರಿನ ಆಸ್ಥಾನ ಪಂಡಿತರೆಂದು ಸನ್ಮಾನಿಸಲ್ಪಟ್ಟರು. ಈ ಕಲಾಕಾರರ ಜೊತೆಗೆ ಸಾಥ ನೀಡಿದ ವಾದ್ಯ ಸಂಗೀತಗಾರರಿಗೂ ಸಹ ಮೈಸೂರು ಅರಸರು ಸನ್ಮಾನ ಮಾಡುತ್ತಿದ್ದರು.

ಆ ನಂತರ ಮೈಸೂರು ಆಸ್ಥಾನ ತಬಲಾ ವಿದ್ವಾಂಸರಾದವರಲ್ಲಿ ಸೀನಪ್ಪ, ಶೇಷಪ್ಪ, ಹಾಗೂ ಚಂದ್ರಶೇಖರ ಇವರು ಗಣ್ಯರು. ಚಂದ್ರಶೇಖರವರ ಮಕ್ಕಳಾದ ಸದಾಶಿವ ಮೂರ್ತಿ ಹಾಗೂ ಸುಧರ್ಮ ಅಲ್ಲದೇ ಮೈಸೂರು ವಿಶ್ವವಿದ್ಯಾಲಯದ ಸಂಗೀತ ಕಾಲೇಜಿನಲ್ಲಿ ಪ್ರಾಂಶುಪಾಲ, ಆಸ್ಥಾನ ವಿದ್ವಾನ ಹಾಗೂ ಆಕಾಶವಾಣಿ ಕಲಾವಿದರಾದ ವಿದ್ವಾನ ಬಿ. ಎಸ್ ವಿಜಯ ರಾಘವನ್

ಇವರೆಲ್ಲರಿಂದ ದೊರೆತ ಮಾಹಿತಿ ಆಧರಿಸಿ, ಕರ್ನಾಟಕದಲ್ಲಿಯ ಪರಿಸರದ ಬಗ್ಗೆ ಈ ಮುಂದೆ ವಿವರಿಸಲಾಗಿದೆ.

ಮೈಸೂರು ಆಸ್ಥಾನ ವಿದ್ವಾನರಾದ ಬಿಡಾರಂಕೃಷ್ಣಪ್ಪ, ವೀಣೆ ಶೇಷಣ್ಣ, ಎಂ, ಎಸ್ ರಾಮಯ್ಯ ಮತ್ತು ಸುಬ್ರಮಣ್ಯಂ ಮುಂತಾದ ಸಂಗೀತ ಕಲಾವಿದರಿಗೆ ರಂಗಣ್ಣನವರು ಕರ್ನಾಟಕಿ ಪದ್ಧತಿಯಲ್ಲಿಯೇ ತಬಲಾಸಾಥ ನೀಡುತ್ತಿದ್ದರು. ತಬಲಾ ರಂಗಣ್ಣನವರ ಶಿಷ್ಯಂದಿರಾದ ಸೀನಪ್ಪ, ಶೇಷಪ್ಪ ಮತ್ತು ಚಂದ್ರಶೇಖರ ಇವರೂ ಸಹ ಆಸ್ಥಾನದಲ್ಲಿ ಸಂಗೀತ ಕಲಾವಿದರಿಗೆ ತಬಲಾ ಸಾಥ ನೀಡುವದನ್ನು ಮುಂದುವರಿಸಿಕೊಂಡು ಬಂದರು. ಆಸ್ಥಾನದಲ್ಲಿ ಮೃದಂಗಕ್ಕಿಂತ ತಬಲಾದ ಬಳಕೆಯು ಹೆಚ್ಚಾಗಿದ್ದು ತಬಲಾ ವಾದಕರಾದ ಈ ಮೂವರು ಸಹೋದರರು ಹಿಂದೂಸ್ತಾನಿ ಸಂಗೀತಗಾರರಿಗೆ ಹಿಂದೂಸ್ತಾನಿ ಸಂಗೀತದ ಪ್ರಕಾರ ತಬಲಾ ಠೇಕಾ ನುಡಿಸುತ್ತಿದ್ದರು ಮತ್ತು ಕರ್ನಾಟಕಿ ಸಂಗೀತಗಾರರಿಗೆ ಕರ್ನಾಟಕಿ ಪದ್ಧತಿಯ ಪ್ರಕಾರದ ಮೃದಂಗ ಬೋಲುಗಳನ್ನು ತಬಲಾದ ಮೇಲೆಯೇ ನುಡಿಸಿ ಸಾಥ ನೀಡುತ್ತಿದ್ದರು. ಸೀನಪ್ಪನವರಿಗೆ ಹಿಂದೂಸ್ತಾನಿ ಸಂಗೀತದಲ್ಲಿ ಹೆಚ್ಚು ಆಸಕ್ತಿ ಇದ್ದ ಕಾರಣ ಕೃಷ್ಣರಾಜ ಒಡೆಯರ ಅವರು ಸೀನಪ್ಪನವರಿಗೆ ತಿಂಗಳಿಗೆ ೨೦ ರೂ ಶಿಷ್ಯವೇತನ ಕೊಟ್ಟು ಹಿಂದೂಸ್ತಾನಿ ಪದ್ಧತಿ ತಬಲಾ ಕಲಿಯಲು ಬಡೋದಾಕ್ಕೆ ಕಳಿಸಿದರು. ಸೀನಪ್ಪನವರು ಅಲ್ಲಿ ಹನ್ನೆರಡು ವರುಷ ತಬಲಾ ಶಿಕ್ಷಣ ಪಡೆದುಕೊಂಡು ಮರಳಿದರು. ಇದಲ್ಲದೇ ಕೃಷ್ಣರಾಜ ಒಡೆಯರ ಅವರು ಸೀನಪ್ಪ ಮತ್ತು ಶೇಷಪ್ಪ ಇಬ್ಬರನ್ನೂ ಇಂಗ್ಲೆಂಡಿಗೆ ಹೋದಾಗ ಜೊತೆಗೆ ಕರೆದುಕೊಂಡು ಹೋಗಿದ್ದರು. ಸೀನಪ್ಪನವರ ಕಡೆ ತಬಲಾ ಶಿಕ್ಷಣ ಪಡೆದವರಲ್ಲಿ ವಿವೇಕ ಎಂಬುವರು ಒಬ್ಬರು.

ಆಸ್ಥಾನ ವಿದ್ವಾನ ಬಿ. ಎಸ್ ವಿಜಯ ರಾಘವನ ಇವರ ದೊಡ್ಡಪ್ಪ ವಿದ್ವಾನ ಬಿ. ದೇವೇಂದ್ರಪ್ಪನವರೂ ಸಹ ಆಸ್ಥಾನ ವಿದ್ವಾಂಸರಾಗಿದ್ದರು. ಉತ್ತರ ಹಿಂದೂಸ್ತಾನದಿಂದ ಹಾಗೂ ಧಾರವಾಡ-ಹುಬ್ಬಳ್ಳಿಯಿಂದ ಮೈಸೂರು ಉತ್ಸವಕ್ಕೆ ಬಂದ ಕಲಾವಿದರು ಇವರ ಮನೆಯಲ್ಲಿಯೇ ಮೊದಲು ಸಂಗೀತ ಕಾರ್ಯಕ್ರಮ ಕೊಟ್ಟು ಆಮೇಲೆ ಆಸ್ಥಾನದ ಕಾರ್ಯಕ್ರಮಕ್ಕೆ ಹೋಗುತ್ತಿದ್ದರು. ಉತ್ಸವಕ್ಕೆ ಬಂದ ಈ ಕಲಾವಿದರಿಗೆ ಸೀನಪ್ಪನವರು ತಬಲಾ ಸಾಥ ಕೊಡುತ್ತಿದ್ದರು.

ಸೀನಪ್ಪನವರ ತಮ್ಮ ಚಂದ್ರಶೇಖರ ಅವರು ಹಿಂದೂಸ್ತಾನಿ ಸಂಗೀತದ ಎಷ್ಟೋ ಚೀಜುಗಳನ್ನು ದೇವೇಂದ್ರಪ್ಪನವರಿಗೆ ಶಾಸ್ತ್ರೀಯವಾಗಿ ಕಲಿಸಿದರು. ಹೀಗಾಗಿ ದೇವೇಂದ್ರಪ್ಪನವರು ಇವರ ಸಹೋದರರಾದ ಸೀನಪ್ಪ ಹಾಗೂ ಶೇಷಪ್ಪರಿಗಲ್ಲದೇ ಹೆಚ್ಚಾಗಿ ಚಂದ್ರಶೇಖರ ಅವರನ್ನೆ ತಬಲಾ ಸಾಥಿಗೆ ತೆಗೆದುಕೊಳ್ಳುತ್ತಿದ್ದರು.

ಚಂದ್ರಶೇಖರ ಮಗ ಸದಾಶಿವ ಮೂರ್ತಿಯವರು ತಮ್ಮ ತಂದೆ ಹಾಗೂ ದೊಡ್ಡಪ್ಪ

ಸೀನಪ್ಪನವರ ಕಡೆ ತಬಲಾ ಅಭ್ಯಾಸ ಮಾಡಿದರು. ಇದಲ್ಲದೇ ಸದಾಶಿವಪ್ಪ ಹಾಗೂ ಉಸ್ತಾದ ಹಲಿಂ ಜಾಪರ ಖಾನ ಇವರಲ್ಲಿಯೂ ಸಹ ತಬಲಾ ವಾದನದ ಹೆಚ್ಚಿನ ಮಾಹಿತಿಯನ್ನು ತೆಗೆದುಕೊಂಡರು. ಸದಾಶಿವ ಮೂರ್ತಿಯವರು ತಬಲಾ ಪರಂಪರೆಯನ್ನು ಈ ವರೆಗೆ ನಡೆಸಿಕೊಂಡು ಬಂದಿದ್ದಾರೆ. ಇವರ ಕೈಯಲ್ಲಿ ತರಬೇತಿ ಹೊಂದಿದ ಶಿಷ್ಯಂದಿರೆಂದರೆ ಅರುಣಕುಮಾರ, ಲೋಕೇಶ, ಶಿವಸುಂದರ, ಸತ್ಯಂ, ವಿಜಯನ್.

ಕರ್ನಾಟಕದಲ್ಲಿ ಸಂಗೀತ ಕ್ಷೇತ್ರದ ಬಹುಮುಖ ಪ್ರತಿಭೆಯನ್ನು ಪಡೆದ ಗಾನಯೋಗಿ ಪಂಡಿತ ಪಂಚಾಕ್ಷರಿ ಗವಾಯಿಗಳ ಹೆಸರು ಇಲ್ಲಿ ಉಲ್ಲೇಖನೀಯ. ಗಾಯನ ಕಲೆಯಲ್ಲಿ ನೈಪುಣ್ಯತೆಯುಳ್ಳ ಇವರು ಅನೇಕ ಸಂಗೀತ ವಾದ್ಯಗಳನ್ನು ನುಡಿಸುವದರಲ್ಲಿಯೂ ಪ್ರಾವೀಣ್ಯತೆ ಹೊಂದಿದವರಾಗಿದ್ದರು. ಇವರು ಹುಟ್ಟುಗುರುಡರಾಗಿದ್ದು ಧಾರವಾಡ ಜಿಲ್ಲೆಯ ಹಾನಗಲ್ ತಾಲೂಕಿನ ಕಾಡಶೆಟ್ಟಿಹಳ್ಳಿಯಲ್ಲಿ ೨-೨-೧೮೯೨ ರಂದು ಇವರು ಜನಿಸಿದ್ದರು. ಇವರ ತಂದೆ ತಾಯಿಗಳು ಗುರುಪಾದಯ್ಯ -ನೀಲವ್ಮ ಎಂಬವರಾಗಿದ್ದರು. ಅಂಥರಾದ ಪಂಡಿತ ಪಂಚಾಕ್ಷರಿಯವರಿಗೆ ಗಾಯನ ಕಲೆಯೇ ಜೀವನಾಧಾರವಾಯಿತು. ಗಾಯನ ಕಲೆಯಲ್ಲಿ ಮೊದಲ ಪ್ರಗತಿಯು ಇದ್ದರೂ ಮುಂದೆ ತಬಲಾವಾದನ ಕಲೆಯಲ್ಲಿಯೂ ಶಿಕ್ಷಣ ಪಡೆಯುವ ಇಚ್ಛೆ ಇವರಲ್ಲಿ ಮೂಡಿ ಈ ಕಲೆಯನ್ನು ಆಗಿನ ತಬಲಾ ವಾದನದಲ್ಲಿ ಹೆಸರುಗೊಂಡ ಬಾಗಲಕೋಟಿ ನಿವಾಸಿ ರಾಜಣ್ಣ ( ರಾಜಾ ಸಾಹೇಬ ) ಇವರಲ್ಲಿ ಕಲಿಯುವದರ ಮೂಲಕ ತಬಲಾ ವಾದನ ಪ್ರವೀಣರಾದರು. ಇವರು ರಾಜಣ್ಣನವರ ಬಳಿ ಅಲ್ಲದೇ ಶ್ರೀ ಶಿವಯ್ಯ ಜೇಕಿನ ಕಟ್ಟಿ ಹಾಗೂ ಬೆಳಗಾಂವ ಶಹಾಪೂರದ ಶ್ರೀ ಮಲ್ಲೇಶಪ್ಪ ಎಂಬುವರಲ್ಲಿಯೂ ಶಿಕ್ಷಣ ಪಡೆದುದ್ದುಂಟು ಪಂಡಿತ ಪಂಚಾಕ್ಷರಿ ಗವಾಯಿಗಳು ಎಡಗೈಯಿಂದಲೇ ತಬಲಾ ಬಾರಿಸುತ್ತಿದ್ದು ಕಿರು ಬೆರಳಿನಿಂದ ಟಾಕಿ ಹಾಕುತ್ತಿದ್ದುದು ಇವರ ಒಂದು ವೈಶಿಷ್ಟ್ಯ. ಗಾಯನ ಕಲೆಯ ಜೊತೆಗೆ ತಬಲಾವಾದನದಲ್ಲಿ ಲಯಕಾರಿಯ ವೈಶಿಷ್ಟ್ಯತೆಯು ಎದ್ದು ಕಾಣುತ್ತಿತ್ತು. ಗವಾಯಿಗಳು ಹಿಂದೂಸ್ತಾನಿ ಸಂಗೀತ ಅಷ್ಟೇ ಅಲ್ಲದೇ ಕರ್ನಾಟಕಿ ಸಂಗೀತದಲ್ಲಿಯೂ ಪ್ರವೀಣರಾಗಿದ್ದು ಉಭಯಗಾನ ವಿಶಾರದರೆಂಬ ಖ್ಯಾತಿಗೆ ಪಾತ್ರರಾಗಿದ್ದರು. "ಪಂ. ಪಂಚಾಕ್ಷರಿ ಗವಾಯಿಗಳಲ್ಲಿ ತಬಲಾ ಶಿಕ್ಷಣ ಹೊಂದಿದ ಶಿಷ್ಯರಲ್ಲಿ ಶ್ರೀ. ಗದಗಯ್ಯ ಹಿರೇಮಠ, ಶ್ರೀ ಸುರಪುರ ಚೆನ್ನ ಬಸಯ್ಯ ಮತ್ತು ಪ್ರೊ. .ಕೆ. ಎಸ. ಹಡಪದ ಮುಂತಾದವರು"[೧] ಇವರ ಇತರ ತಬಲಾ ಶಿಷ್ಯ ವರ್ಗದಲ್ಲಿ ಪ್ರಮುಖರಾದವರೆಂದರೆ ಈಗಿನ ಗದುಗಿನ ವಿರೇಶ್ವರ ಪುಣ್ಯಾಶ್ರಮದ ಪಂಡಿತ ಪುಟ್ಟರಾಜ ಗವಾಯಿಗಳು.

ಪಂಡಿತ ಬಸವರಾಜ ರಾಜಗುರು, ದಿ. ಪಂಡಿತ ಅರ್ಜುನಸಾ ನಾಕೋಡ ಗಾನಯೋಗಿಗಳಾದ ಪಂ. ಪಂಚಾಕ್ಷರಿ ಗವಾಯಿಗಳು ಮತ್ತು ಅವರ ಮೂವರು ಶಿಷ್ಯಂದಿರು ತಬಲಾದಲ್ಲಿ ವಿಲಂಬಿತ ಏಕತಾಲ, ಝುಮರಾ, ತಿಲವಾಡಾ ಮುಂತಾದವುಗಳನ್ನು ನುಡಿಸುತ್ತಲೇ

ಖ್ಯಾಲಗಳನ್ನು ಹಾಡುವದನ್ನು ರೂಢಿಸಿಕೊಂಡರು. ಈ ಪದ್ಧತಿಯಿಂದ ಸಂಗೀತ ಕಲಿಯುವವರಿಗೆ ಸಂಗೀತದ ಪರಿಜ್ಞಾನದ ಜೊತೆಗೆ ತಾಳಲಯದ ಮೇಲೆ ಹಿಡಿತ ಸಾಧಿಸುವಲ್ಲಿ ಸಹಾಯಕಾರಿ ಎನಿಸಿತು. ಗಾನಯೋಗಿ ಪಂಡಿತ ಪಂಚಾಕ್ಷರಿ ಗವಾಯಿಗಳಲ್ಲಿ ಪರಿಣತಿ ಹೊಂದಿದ ಶಿಷ್ಯವೃಂದವು ಪಂಚಾಕ್ಷರಿ ಘರಾಣೆಯನ್ನೇ ನಿರ್ಮಿಸಿದೆ.

ಡಾ. ಪುಟ್ಟರಾಜ ಗವಾಯಿಗಳು ಹಾನಗಲ್ ತಾಲೂಕಿನ ದೇವಗಿರಿಯಲ್ಲಿ ಹುಟ್ಟಿದರು. ತಂದೆ ರೇವಯ್ಯ ತಾಯಿ ಸಿದ್ದಮ್ಮ. ತಂದೆ ತೀರಕೊಂಡ ನಂತರ ಇವರ ಮಾವಂದಿರಾದ ಚಂದ್ರಶೇಖರ ಶಾಸ್ತ್ರಿಗಳು ಪುಟ್ಟರಾಜರನ್ನು ದೇವಗಿರಿಗೆ ಕರೆದುಕೊಂಡು ಬಂದು ಪುಟ್ಟರಾಜಗವಾಯಿಗಳ ಸಂಗೀತ ಶಿಕ್ಷಣ ಪ್ರಾರಂಭಿಸಿದರು. ಮುಂದೆ ಗಾನಯೋಗಿ ಪಂಚಾಕ್ಷರಿ ಗವಾಯಿಗಳ ಆಶ್ರಯದಲ್ಲಿ ಸಂಗೀತದ ಹೆಚ್ಚಿನ ಅಭ್ಯಾಸ ನಡೆಯಿತು. ಜೊತೆಗೆ ಹಾರ್ಮೋನಿಯಂ ವಾಯಲಿನ, ಸಾರಂಗಿ ಹಾಗೂ ತಬಲಾ ವಾದನ ಶಿಕ್ಷಣವು ಇವರಿಗೆ ದೊರೆಯಿತು. ಇವರಿಗೆ ಕನ್ನಡ, ಸಂಸ್ಕೃತ ಮತ್ತು ಹಿಂದಿ ಈ ಮೂರು ಭಾಷೆಗಳನ್ನು ಇವರು ಅರಿತವರಾಗಿದ್ದು. "ತ್ರಿಭಾಷಾ ಕವಿ" ಎಂಬ ಬಿರುದನ್ನು ಇವರು ಸಂಪಾದಿಸಿದರು. ಇವರ ಶಿಷ್ಯ ವರ್ಗದಲ್ಲಿ ಪಂಡಿತ ಅರ್ಜುನಸಾ ನಾಕೋಡ, ಪಂ. ಸೋಮನಾಥ ಮರಡೂರ, ಪಂ. ವೆಂಕಟೇಶಕುಮಾರ, ಶ್ರೀ. ಡಿ. ಕುಮಾರ ದಾಸ ಮುಂತಾದ ಸಂಗೀತಗಾರರು ಹಾಗೂ ತಬಲಾ ವಾದನಕಾರರಾದ ನಾಗಮುನಿ, ಶ್ರೀ. ಎಂ. ನಾಗೇಶ, ಶ್ರೀ. ಶಿವಮೂರ್ತಿ ಆಳವಂಡಿ, ಶ್ರೀ. ಶಿವಕುಮಾರ ಕುಕನೂರ, ಶ್ರೀ. ಗುರಸಂಗಪ್ಪಾ ಹೂಗಾರ, ಶ್ರೀ. ಶರಣಪ್ಪ ದುತ್ತರಗಿ, ಶ್ರೀ. ಬಸವಂತರಾಯ ಹೂಗಾರ, ಶ್ರೀ. ಹನಮಂತ ಹೂಗಾರ, ಶ್ರೀ. ಶ್ರೀಕಾಂತ ಬಾದಾಮಿ, ಶ್ರೀ. ಶ್ಯಾಮರಾವ ಪುಲಾರಿ ಮುಂತಾದವರು ಮುಖ್ಯರಾಗಿದ್ದಾರೆ. ಇವರಿಗೆ ದೊರೆತ ಪ್ರಶಸ್ತಿಗಳು: ಅಕ್ಯಾಡೆಮಿ ಪ್ರಶಸ್ತಿ, ರಾಜ್ಯ ಪ್ರಶಸ್ತಿ, ಸಂಗೀತ ವಿದ್ವಾನ ಪ್ರಶಸ್ತಿ, ನಾಡೋಜ ಪ್ರಶಸ್ತಿ, ಕರ್ನಾಟಕ ವಿಶ್ವವಿದ್ಯಾಲಯದ ಡಾಕ್ಟರೇಟ್ ಪದವಿ, ಕನಕ ಪುರಂದರ ಪ್ರಶಸ್ತಿ, ಇವಲ್ಲದೆ ಬಸವಪುರಾಣವನ್ನು ಕನ್ನಡದಿಂದ ಹಿಂದಿಗೆ ಅನುವಾದಿಸಿದ್ದಕ್ಕಾಗಿ ಇವರಿಗೆ ರಾಷ್ಟ್ರಪತಿಯವರಿಂದ "ಬಸವಶ್ರೀ" ಪ್ರಶಸ್ತಿ ಕೂಡ ಲಭಿಸಿತು. ಅಸಂಖ್ಯಾತ ಅಂಧ ಹಾಗೂ ಅನಾಥ ಶಿಷ್ಯರಿಗೆ ಸಂಗೀತ ಶಿಕ್ಷಣ ನೀಡುತ್ತ ಪಂ. ಪುಟ್ಟರಾಜ ಗವಾಯಿಗಳು ಗದುಗಿನ ವೀರೇಶ್ವರ ಪುಣ್ಯಾಶ್ರಮವನ್ನು ಯಶಸ್ವಿಯಾಗಿ ನಡೆಸಿಕೊಂಡು ಸಾಗಿದ್ದಾರೆ.

## ಅಧ್ಯಾಯ - ೩

# ತಬಲಾದ ವಿವಿಧ ಘರಾಣೆಗಳ ಪರಂಪರೆ

ಸಂಗೀತ ಪರಂಪರೆಯಲ್ಲಿ ವಿವಿಧ ಘರಾಣೆಗಳು ಇರುವಂತೆ ತಬಲಾವಾದನದಲ್ಲಿಯೂ ವಿವಿಧ ಘರಾಣೆಗಳು ಇವೆ. ಘರಾಣೆಯ ವೈಶಿಷ್ಟ್ಯವು ಅವರು ಅನುಸರಿಸುವ, ಕುಳಿತುಕೊಳ್ಳುವ ಪದ್ಧತಿ, ತಬಲಾ ನುಡಿಸುವಾಗ ಬೆರಳು ಉಪಯೋಗಿಸುವ ವಿಧಾನ ಹಾಗೂ ಬೋಲುಗಳ ರಚನೆಗಳನ್ನು ಅವಲಂಬಿಸಿರುತ್ತದೆ. ಈ ಪದ್ಧತಿಗಳು ಆಯಾ ಘರಾಣೆಗಳಿಗೆ ಬೇರೆ ಬೇರೆಯಾಗಿರುತ್ತವೆ. ತಬಲಾ ವಾದನ ಘರಾಣೆಗಳಲ್ಲಿ ಮುಖ್ಯವಾದ ಘರಾಣೆಗಳೆಂದರೆ ಆರು. ಆವು ಈ ಕೆಳಗಿನಂತಿವೆ.

೧. ದಿಲ್ಲಿ ಘರಾಣಾ

೨. ಅಜರಡಾ ಘರಾಣಾ

೩. ಲಖನೌ ಘರಾಣಾ

೪. ಘರೂಖಾಬಾದ ಘರಾಣಾ

೫. ಬನರಾಸ ಘರಾಣಾ

೬. ಪಂಜಾಬ ಘರಾಣಾ

ಮೇಲೆ ತಿಳಿಸಿದ ಆರು ಘರಾಣೆಗಳ ಪರಂಪರೆ ಹಾಗೂ ವೈಶಿಷ್ಟ್ಯತೆಗಳನ್ನು ಕುರಿತು ಈ ಕೆಳಗೆ ಪ್ರಸ್ತಾಪಿಸಲಾಗಿದೆ.

**ದಿಲ್ಲಿ ಘರಾಣೆ ಪರಂಪರೆ:**

ಸುಧಾರ ಖಾನ ಡಾಡಿಯು ದಿಲ್ಲಿ ಘರಾಣೆಯ ಮೂಲ ಪುರುಷನು. ಇವನು ಪಖವಾಜವನ್ನು ಇಬ್ಬಾಗಿಸಿ ತಬಲಾ ವಾದ್ಯವನ್ನು ಕಂಡುಹಿಡಿದನು. ದಿಲ್ಲಿಯು ಸುಧಾರಖಾನನ ನಿವಾಸ ಸ್ಥಾನವಾಗಿರುವದರಿಂದ ಇವನಿಂದ ಪ್ರವರ್ತಿತವಾದ ತಬಲಾವಾದನ ಪದ್ಧತಿಗೆ "ದಿಲ್ಲಿ ಘರಾಣೆ" ಎಂದು ಹೆಸರಿಸಲಾಯಿತು.

"ಸಿದ್ಧಾರ ಖಾನನಿಗೆ ರೋಷನ್‌ಖಾನ್, ಕಲ್ಲುಖಾನ್ ಮತ್ತು ತುಲ್ಲನ್‌ಖಾನ್ ಎಂಬ ಮೂವರು ಶಿಷ್ಯರು. ಆದರೆ ಇವರ ಪರಂಪರೆಯ ವಿಷಯವಾಗಿ ಹೆಚ್ಚಿನ ವಿವರಗಳಾವವೂ ದೊರಯುವದಿಲ್ಲ."[೧]

ಸಿದ್ಧಾರ ಖಾನರ ಮೂವರು ಪುತ್ರರಲ್ಲಿ ಬುಗರಾ ಖಾನ ಮತ್ತು ಘಸೀಟ ಖಾನರ

೧. "ಗ್ರಂಥ ತಬಲಾ ಶಾಸ್ತ್ರ ವಿಶಾರದ" ಲೇ- ಪ್ರೋ ರಾಜೀವ ಪುರಂದರೆ, ಪುಟ. 35 ಪ್ರಕಾಶನ 1969

ಹೆಸರುಗಳು ಗೊತ್ತಿದ್ದು ತೃತೀಯ ಪುತ್ರನ ಹೆಸರು ಅಜ್ಞಾತ ( ಹೆಸರು ಉಲ್ಲೇಖವಿಲ್ಲ) ಬುಗರಾಖಾನ ಇವರ ಪುತ್ರರಾದ ಸಿತಾಬಖಾನ ಮತ್ತು ಗುಲಾಬ ಖಾನ ಈರ್ವರೂ ಪ್ರಸಿದ್ಧ ತಬಲಾ ವಾದಕರಾಗಿದ್ದರು. "ಸಿತಾಬ ಖಾನರ ಪುತ್ರರಾದ ನಜೀರ ಅಲಿ ಮತ್ತು ಬಡೇ ಕಾಲೇಖಾನರು ತಬಲಾ ವಾದನದಲ್ಲಿ ಹೆಸರುವಾಸಿಗಳಾಗಿದ್ದರು. ಬಡೇ ಕಾಲೆ ಖಾನರ ಪುತ್ರರು ಬೋಲಿಬಕ್ಷರು ದಿಲ್ಲಿ ಪರಂಪರೆಯ ಹೆಸರಾಂತ ತಬಲಾವಾದಕ ನತ್ಥುಖಾನರು ಬೋಲಿಬಕ್ಷರ ಪುತ್ರರು. ಇವರ ಶಿಷ್ಯ ಪರಂಪರೆಯಲ್ಲಿ ಮುನೀರ ಖಾನ ಎಂಬುವರು ಪ್ರಮುಖರಾಗಿದ್ದಾರೆ. ಮುನೀರ ಖಾನರ ಶಿಷ್ಯರಲ್ಲಿ ಅಹಮದ ಜಾನ ತಿರಖ್ವಾ, ಪೈ. ಅಮೀರ ಹುಸೇನ ಖಾನ, ಗುಲಾಬ ಹುಸೇನ ಖಾನ, ಪೈ. ಶಮಶುದ್ದೀನ ಖಾನ ಮುಂತಾದವರಿರುವರು. ಮೇರಠದ ಪ್ರಸಿದ್ಧ ತಬಲಾವಾದಕ ಹಬೀಬುದ್ದೀನ ಖಾನರು ಸಹ ನತ್ಥೂಖಾನರ ಶಿಷ್ಯರಲ್ಲೊಬ್ಬರಾಗಿದ್ದಾರೆ. ಪೈ. ಅಮೀರ ಹುಸೇನ ಖಾನರ ಶಿಷ್ಯರು ಶ್ರೀ ಬಾಬಾ ಸಾಹೇಬ ಮಿರಜಕರರಾಗಿದ್ದಾರೆ."[೧]

ಬುಗರಾ ಖಾನರ ದ್ವಿತೀಯ ಪುತ್ರರಾದ ಗುಲಾಬ ಖಾನರ ಪುತ್ರರು ಮೊಹಮ್ಮದ ಖಾನರು, ಇವರ ಪುತ್ರರು ಛೋಟೆ ಕಾಲೇ ಖಾನ. ಇವರ ಪುತ್ರ ಗಾಮೆ ಖಾನರ ಪುತ್ರರಾದ ಇನಾಮ ಅಲಿ ಅವರು ಇಂದು ದಿಲ್ಲಿ ಘರಾಣೆಯ ಪ್ರತಿನಿಧಿಗಳಾಗಿದ್ದಾರೆ.

ಸಿದ್ಧಾರ ಖಾನರ ತೃತೀಯ ಪುತ್ರರ (ಅಜ್ಞಾತ) ವಂಶ ಪರಂಪರೆಯು ತಬಲಾ ವಾದನದಲ್ಲಿ ವಿಶೇಷವಾಗಿದೆ. ಇವರಿಗೆ ಮಕ್ಕೂಖಾನ, ಮೋದೂ ಖಾನ, ಮತ್ತು ಬಖ್ಷೂ ಖಾನ ಎಂಬ ಮೂವರು ಪುತ್ರರಿದ್ದು ಇವರೆಲ್ಲ ಪ್ರಸಿದ್ಧ ತಬಲಾ ವಾದಕರಾಗಿದ್ದರು. "ಲಖನೌವಿನ ನವಾಬರ ಕರೆಯನ್ನು ಮನ್ನಿಸಿ ಮೋದೂ ಖಾನ ಮತ್ತು ಬಖ್ಷೂ ಖಾನರು ದಿಲ್ಲಿಯಿಂದ ಲಖನೌಗೆ ಕಳಿಸಲ್ಪಟ್ಟರು."[೨] ಈ ರೀತಿಯಾಗಿ ದಿಲ್ಲಿ ಪರಂಪರೆಯ ಮೋದೂ ಖಾನ ಹಾಗೂ ಬಖ್ಷೂ ಖಾನರು ಲಖನೌಗೆ ಬಂದು ತಬಲಾ ವಾದನದಲ್ಲಿ ಬದಲಾವಣೆ ತಂದ ಕಾರಣ ಈ ಘರಾಣೆಯು "ಪೂರಬ" "ಲಖನೌ"ಘರಾಣೆ ಎಂದು ಕರೆಯಲ್ಪಟ್ಟಿತು.

ಸುಧಾರ ಖಾನರ ಕಿರಿಯ ಸಹೋದರ ಚಾಂದ ಖಾನರಿಗೆ ಅಲಿ ಮಸೀತ ಖಾನ ಮತ್ತು ಹುಸೇನ ಖಾನರೆಂಬ ಪುತ್ರರಿದ್ದರು. "ಹುಸೇನ ಖಾನರ ಪುತ್ರರಾದ ನನ್ಹೆ ಖಾನ, ಮತ್ತು ಘಸೀಟ ಖಾನರು ಉತ್ತಮ ತಬಲಾವಾದಕರಾಗಿದ್ದರು."[೩] ನನ್ಹೆ ಖಾನರ ಶಿಷ್ಯರಾದ ಜುಗನಾ ಖಾನರು ಪ್ರಸಿದ್ಧ ತಬಲಾವಾದಕರಾಗಿದ್ದರು. ಮೆಹಬೂಬ ಖಾನ ಸಾಹೇಬ ಮಿರಜಕರ ಅವರು ಜುಗನಾ ಖಾನರ ಶಿಷ್ಯರಾಗಿದ್ದರು. ಪಂಡಿತ ಬಸವರಾಜ ಬೆಂಡಿಗೇರಿಯವರು ಉಸ್ತಾದ ಮೆಹಬೂಬ ಖಾನ ಮಿರಜಕರ ಇವರ ಶಿಷ್ಯರು. ಉಸ್ತಾದ ಮೆಹಬೂಬ ಖಾನ ಸಾಹೇಬ ಮಿರಜಕರರ ಇತರ ಶಿಷ್ಯರಲ್ಲಿ

---

೧. ಗ್ರಂಥ."ತಬಲಾ ಶಾಸ್ತ್ರ ವಿಶಾರದ" ಲೇ. ಪ್ರೊ. ರಾಜೀವ ಪರುಂದರೆ, ಪುಟ. ೩೫,೩೬. ಪ್ರಕಾಶನ ೧೯೯೬
೨. ಗ್ರಂಥ."ತಬಲಾ ಶಾಸ್ತ್ರ ವಿಶಾರದ" ಲೇ. ಪ್ರೊ. ರಾಜೀವ ಪರುಂದರೆ, ಪುಟ. ೩೫. ಪ್ರಕಾಶನ ೧೯೯೬
೩. ಅದೇ

ಶ್ರೀ ಗೋಡಬೋಲೆ, ಉಸ್ತಾದ ಶೇಖದಾವೂದ ಖಾನ, ಪಂ. ನಾರಾಯಣರಾವ ಚಿಕ್ಕೋಡಿ, ಮತ್ತು ಉಸ್ತಾದ ಮುಮ್ಮುಲಾಲ ಸಾಂವಗಾವಕರ್ ಮುಂತಾದವರಿರುವರು.

**ದಿಲ್ಲಿ ಘರಾಣೆಯ ವೈಶಿಷ್ಟ್ಯತೆಗಳು :**

೧. ಈ ಘಾರಾಣೆ ವಾದನ ಶೈಲಿಯು ಅತ್ಯಂತ ಮಧುರ ಹಾಗೂ ಅತ್ಯಂತ ಕೋಮಲವಾಗಿದೆ. ಇದರಲ್ಲಿ ಎರಡು ಬೆರಳಿನ ಉಪಯೋಗವಾಗುತ್ತದೆ. ಅಂದರೆ ತರ್ಜನಿ ಹಾಗೂ ಮಧ್ಯ ಬೆರಳಿನ ಪ್ರಯೋಗವಿರುತ್ತದೆ. ಈಗೆಲ್ಲಾ ಅನಾಮಿಕಾ ಬೆರಳಿನ ಉಪಯೋಗವು ಹೆಚ್ಚಾಗಿ ಆಗುತ್ತದೆ. ಎರಡೂ ಬೆರಳುಗಳು ಒಂದೇ ಸಲ ಪ್ರಯೋಗವಾಗುವದಿಲ್ಲ. ಒಂದರ ನಂತರ ಒಂದು ಬೆರಳಿನ ಪ್ರಯೋಗ ವಾಗುವುದು ಕಂಡುಬರುತ್ತದೆ.

೨. ಈ ಘರಾಣೆಯ ವಾದನ ಶೈಲಿಯು "ಛಾಂಟ ಕಾ ಬಾಜ" ಎಂದು ಹೆಸರಾಗಿದೆ. ಹಾಗೂ "ಕಿನಾರಾ ಕಾ ಬಾಜ" ಎಂದು ಈ ಘರಾಣೆಗೆ ಕರೆಯುವದುಂಟು ಕಿನಾರಾದ ಪ್ರಯೋಗವಿರುವದರಿಂದ ಇದರಲ್ಲಿ ಧ್ವನಿಯೂ ಸೀಮಿತವಾಗಿರುತ್ತದೆ.

೩. "ಇಸಭಾಜ ಮೆ ಪೇಶಕಾರ, ಕಾಯದಾ, ರೇಲಾ, ಮುಖಡಾ, ಮೊಹರಾ ಏವಂ ಛೋಟೆ ಛೋಟೆ ಟುಕುಡೆ, ವಿಶೇಷ ರೂಪ ಸೆ ಬಜಾಯೆ ಜಾತೆ ಹೈ. ಪೂರಬ ಬಾಜ ಕಿ ಭಾಂತಿ ಇಸಮೆ ಬಡೆ ಪರನ, ಜೋರದಾರ ಪರನೋಂಕಾ ಅಭಾವ ಹೈ. ಇಸಮೆ ಪ್ರಯುಕ್ತ ಹೋನೆವಾಲೆ ಕುಛ ವಿಶೇಷ ಬೋಲ ಸಮೂಹ ಧಿನಾಗೆನಾ, ಧಾಧಾ ತಿರಕಿಟ, ಧಾಗೆನಾಧಾತಿರಕಿಟ, ಧಾತಿಧಾಗೆ, ಧಾತಿಗೆನಾ ಆದಿ ಹೈ.

**ಅನುವಾದ:** ಈ ಭಾಜನಲ್ಲಿ ಪೇಶಕಾರ, ಕಾಯದಾ, ರೇಲಾ, ಮುಖಡಾ, ಮೊಹರಾ ಅಲ್ಲದೇ ಚಿಕ್ಕ ಚಿಕ್ಕದಾದ ತುಕಡೆಗಳನ್ನು ವಿಶೇಷವಾಗಿ ನುಡಿಸಲಾಗುತ್ತದೆ. ಪೂರಬ ಬಾಜದ ಹಾಗೆ ದೊಡ್ಡದಾದ ಪರನ್, ಜೋರದಾರಿಯಾದ ಗತ್ತ ಚಕ್ರದಾರ ಪರನಗಳ ಅಭಾವ ಇಲ್ಲಿದೆ. ಈ ಬಾಜಿನಲ್ಲಿ ಮುಖ್ಯವಾಗಿ ಧಿನಾಗೆನಾ ಧಾಧಾತಿರಕಿಟ, ಧಾಗೆನಾಧಾ ತಿರಕಿಟ, ಧಾತಿಧಾಗೆ, ಧಾತಿಗೆನಾ"[೧] ಮುಂತಾದ ಬೋಲುಗಳು ಹೆಚ್ಚಾಗಿ ಕಂಡುಬರುತ್ತದೆ.

೪. "ಇಸ್ ಘರಾನೆ ಕಿ ಅಧಿಕಾಂಶ ರಚನಾಯೆ ಚತುಶ್ರ ಜಾತಿ ಮೆ ನಿಬದ್ಧ ಹೋತಿ ಹೈ.

ಅನುವಾದ: ಈ ಘರಾಣೆಯ ರಚನೆಗಳು ಹೆಚ್ಚಾಗಿ ಚತುಶ್ರಜಾತಿಯಲ್ಲಿರುವುದು ಕಂಡುಬರುತ್ತದೆ."[೨]

---

೧. ಗ್ರಂಥ. "ಷಖವಾಜ ಚಾರ ತಬಲಾ ಕೆ ಘರಾಣೆ ಏನಂ ಪರಂಪರಾಯ", ಲೇ. ಆಬಾನ. ಈ. ಮಿಸ್ತ್ರಿ ಪುಟ. ಸಂಖ್ಯೆ. ೧೩೪ ಪ್ರಕಾಶನ ೨೦೦೦

೨. ಗ್ರಂಥ, "ಪಖವಾಚ ಚಾಕಿ ತಬಲಾ ಕೆ ಘರಾನೆ ಏವಂ ಪರಂಪರಾಯೆ ಲೇ. ಆಬಾನ ಈ ಮಿತ್ರ ಪುಟ. ೧೩೪ ಪ್ರಕಾಶನ ೨೦೦೦

೫. ಈ ಬಾಜಿನಲ್ಲಿ ಡಗ್ಗಾವನ್ನು ನುಡಿಸುವಾಗ ತರ್ಜನಿ ಹಾಗೂ ಮಧ್ಯಮ ಬೆರಳಿನ ಪ್ರಯೋಗವಿರುತ್ತದೆ. ಇಲ್ಲಿ ತಬಲಾವನ್ನು ನುಡಿಸುವಾಗ ಕೈಗಳನ್ನು ಮೇಲಕ್ಕೆ ಎತ್ತುವದಿಲ್ಲ ಯಾಕೆಂದರೆ ಇಲ್ಲಿ ಬೆರಳಿನಲ್ಲಿಯೇ ನುಡಿಸುವಂತಹ ಬಾಜ ಇದಾಗಿದೆ.

6. ಇಲ್ಲಿ ಪೂರ್ಣ ಹಸ್ತದ ಪ್ರಯೋಗವು ವರ್ಜ್ಯವಾಗಿರುತ್ತದೆ ಹಾಗೂ ಧಿರಧಿರದ ಉತ್ಪತ್ತಿಯನ್ನು ಎರಡೇ ಬೆರಳಿನಿಂದ ಆಗುತ್ತದೆ ಪೂರಬ ಘರಾಣೆಯಲ್ಲಿ ಧಿರಧಿರ ನುಡಿಸುವ ಸಮಯದಲ್ಲಿ ಕೆಲವೊಂದು ಬೆರಳಿನ ಭಾಗಗಳು ತಬಲಾ ಮುಚ್ಚಗಿಯ ಹೊರಗಿರುತ್ತದೆ. ಧಿರಧಿರದ ಪ್ರಯೋಗವು ಉಸ್ತಾದ ಸಿದ್ಧಾರ ಖಾನ ಸಮಯದಲ್ಲಿ ಅಲ್ಲ ಆ ಮೇಲೆ ಬಂದ ಕೆಲವೊಂದು ಉಸ್ತಾದರ ಮುಖಾಂತರ ಈ ಶಬ್ದದ ಆವಿಷ್ಕಾರವಾಯಿತು.

7. ಈ ಘರಾಣೆಯು ಒಂದು ಶ್ರೇಷ್ಠವಾದ ಘರಾಣೆಯಾಗಿದ್ದು ಇಲ್ಲಿ ತಬಲಾ ಶಬ್ದದಲ್ಲಿ ಬಾಜದ ದರ್ಶನವಾಗುತ್ತದೆ. ಮಧುರ ಹಾಗೂ ಕರ್ಣ ಪ್ರಿಯ ಬಾಜ ಆದ ಕಾರಣ ವಿದ್ವಾನರ ಹಾಗೂ ಶ್ರೋತೃಗಳ ಮೇಲೆ ಒಳ್ಳೆಯ ಪರಿಣಾಮವುಂಟಾಗುತ್ತದೆ.

**ಅಜರಡಾ ಘರಾಣೆಯ ಪರಂಪರೆ :**

ಕಲ್ಲೂ ಖಾನ್ ಮತ್ತು ಮೀರೂಖಾನ ಇವರಿಬ್ಬರು ದಿಲ್ಲಿಯ ಪ್ರಸಿದ್ಧ ತಬಲಾವಾದಕ ಸಿತಾಬಖಾನರ ಶಿಷ್ಯರಾಗಿದ್ದರು. ಇವರು ಮೇರಠ ಜಿಲ್ಲೆಯಲ್ಲಿಯ ಅಜರಡಾ ಗ್ರಾಮದಲ್ಲಿರುತ್ತಿರುವದರಿಂದ ಈ ಬಾಜಿಗೆ ಅಜರಡಾಬಾಜ ಎಂದು ಹೆಸರು ಬಂದಿತು. "ಈ ವಂಶದಲ್ಲಿ ಮೊಹಮ್ಮದಿ ಬಕ್ಷರು ಪ್ರಸಿದ್ಧ ತಬಲಾವಾದಕರಾಗಿದ್ದರು. ಇವರ ಪುತ್ರ ಮಿಯಾ ಚಾಂದಖಾನ ಹಾಗೂ ಪೌತ್ರ ಕಾಲೇಖಾನರು ತಬಲಾವಾದನದಲ್ಲಿ ಪ್ರವೀಣರಾಗಿದ್ದರು. ಕಾಲೇಖಾನರ ಪುತ್ರರಾದ ಹಸ್ಸೂಖಾನ, ಮತ್ತು ಹಸ್ಸೂ ಖಾನ್ ರ ಪುತ್ರ ಶಮ್ಮೂ ಖಾನರು ತಬಲಾವಾದನದಲ್ಲಿ ನಿಪುಣರಿದ್ದರು. ಅಬ್ದುಲ ಕರಿಮ ಖಾನರು ಇವರ ಅಳಿಯರಿದ್ದು ಹಬೀಬುದ್ದೀನರು ಸುಪುತ್ರರಾಗಿದ್ದಾರೆ ಅಬ್ದುಲ್ ಕರೀಮ ಖಾನರ ಶಿಷ್ಯರು ಅಗ್ರಾದ ಪಂ ಶ್ರೀಧರಜಿ ಮತ್ತು ಉ. ಹಬೀಬುದ್ದೀನ ಖಾನರ ಶಿಷ್ಯರು ಬಡೌದೆಯ ಶ್ರೀ ಸುಧಾರಕುಮಾರಜಿ ಸಕ್ಸೇನಾ ಎಂಬುವರಿರುವರು."[೧]

ಈ ಘರಾಣೆಯ ಪರಂಪರೆಯನ್ನು ಜೀವಂತವಾಗಿ ಇಟ್ಟುಕೊಂಡು ಹೊರಟ ಕೆಲವೊಂದು ಕಲಾಕಾರರ ಹೆಸರುಗಳನ್ನು ಈ ಮುಂದೆ ಹೇಳಲಾಗಿದೆ. ಶ್ರೀ ರಮಜಾನ ಖಾನ್, (ದಿಲ್ಲಿ). ಆಶಿಕ ಹುಸೇನ (ಜಯಪೂರ), ಹಶಮತ ಅಲಿ ಖಾನ್ ( ಆಕಾಶವಾಣಿ ಶ್ರೀನಗರ) ಯಶವಂತ ಕೇಳಕರ,(ಮುಂಬಯಿ). ಪಂ. ರಘುನಾಥ ನಾಕೋಡ (ಧಾರವಾಡ)

---

೧. ಗ್ರಂಥ "ತಬಲಾಶಾಸ್ತ್ರ ವಿಶಾರದ," ಲೇ. ಪ್ರೋ ರಾಜೀವ ಪರಂದರೆ, ಪುಟ. ೪೦,೪೧ ಪ್ರಕಾಶನ ೧೯೬೬.

**ಅಜರಡಾ ಘರಾಣೆಯ ವೈಶಿಷ್ಟ್ಯತೆ:**

ಅಜರಡಾ ಘರಾಣೆಯ ಮೂಲ ಪ್ರವರ್ತಕರು ದಿಲ್ಲಿ ಘರಾಣೆಯ ಉಸ್ತಾದವರಿಂದ ತಬಲಾ ಶಿಕ್ಷಣವನ್ನು ಪಡೆದಿದ್ದರು. ಆದಕಾರಣ ಅಜರಡಾ ಘರಾಣೆಯ ಗುರು ಘರಾಣೆ ದಿಲ್ಲಿಘರಾಣೆಯೇ ಆಗಿದೆ. ಆದರೆ ಕಾಲಾನಂತರ ಈ ಘರಾಣೆಯ ಶೈಲಿಯಲ್ಲಿ ಎಷ್ಟು ಅಂತರ ಬಂದಿತೆಂದರೆ ಅದು ತಬಲಾ ನುಡಿಸುವಾಗ ಸ್ಪಷ್ಟವಾಗಿ ಕಂಡು ಬರತೊಡಗಿತು. ಈ ಘರಾಣೆಯ ವಾದನ ಶೈಲಿಯ ವೈಶಿಷ್ಟ್ಯತೆಗಳು ಕೆಳಗಿನಂತಿವೆ.

೧. "ಅಜರಡಾ ಘರಾನೆ ಕೆ ಉಸ್ತಾದೋನೆ ಕಾಯದೆ ಕಿ ರಚನಾಯೇ ತಿಶ್ರ ಜಾತಿ ಮೆ ಅಧಿಕ ಕಿ. ಜಬ ಕಿ ಉಸ ಸಮಯ ತಕ ದಿಲ್ಲಿ ವಾಲೊ ನೆ ಕೇವಲ ಚತುಶ್ರ ಜಾತಿ ಮೆ ಕಾಯದೆ ರಚೆ ಥೆ ಅಜರಡೆ ವಾಲೊಂಕೆ ಇಸ ನವೀನ ಪ್ರಯೋಗ ಏವಂ ಲಯ ವೈಚಿತ್ರತಾ ಕೆ ಕಾರಣ ಉನಕೊ ಸರಲತಾ ಸೆ ಸ್ವತಂತ್ರ ಘರಾಣೆ ಕಿ ಮಾನ್ಯತಾ ಮಿಲಗಯಿ"[1]

**ಅನುವಾದ :** ಅಜರಡಾ ಘರಾಣೆಯ ಉಸ್ತಾದರ ಕಾಯದಾಗಳ ರಚನೆಗಳನ್ನು ತಿಶ್ರ ಜಾತಿಯಲ್ಲಿ ಅಧಿಕವಾಗಿ ಮಾಡಿದರು. ಅಲ್ಲಿಯ ತನಕ ದಿಲ್ಲಿ ಘರಾಣೆಯವರು ಕೇವಲ ಚತುಶ್ರ ಜಾತಿಯಲ್ಲಿಯೇ ಕಾಯದಾಗಳನ್ನು ರಚಿಸಿದ್ದರು. ಅಜರಡಾ ಘರಾಣೆಯ ಈ ಒಂದು ಹೊಸದಾದ ಪ್ರಯೋಗದಿಂದ ಹಾಗೂ ಲಯ ವೈಚಿತ್ರತೆಯ ಕಾರಣದಿಂದ ಈ ಘರಾಣೆಯವರಿಗೆ ಅತ್ಯಂತ ಸರಳತೆಯಿಂದ ಸ್ವತಂತ್ರ ಘರಾಣೆಯ ಮಾನ್ಯತೆಯು ಸಿಕ್ಕಿತು."[1]

೨. "ಇಸ ಘರಾಣೆ ಮೆ ಡಗ್ಗ (ಬಾಯಾ) ಕಾ ಪ್ರಯೋಗ ಮಿಂಡಯುಕ್ತ, ಸುಂದರ ಏವಂ ದಾಹಿನೆ ಕೆ ಬೋಲೊ ಸೆ ಲಡತಾ ಹುವಾ ಹೋತಾ ಹೈ ಜೋ ಅನ್ಯ ಕಿಸಿ ಘರಾನೆ ಸೆ ಅಲಗ ಹೈ. ದೇಖಿಯೆ , ಕಿಸ ಪ್ರಕಾರ ನಿಮ್ನ ಕಾಯದೆ ಕಿ ಪ್ರಥಮ ದೋ ಮಾತ್ರಾ, ಧಾऽಕ್ಡಮೆ ಮಿಂಡ ಕಾ ಕಾಮ ಕಿಯಾ ಜಾತಾ ಹೈ. ಇಸಮೆ ಧಾ ಕೆ ಪಶ್ಚಾತ್ ೧/೩ ಮಾತ್ರಾ ಕಾ ವಿರಾಮ ಬಾಯೆ ಸೆ ಮಿಂಡ ಕೆ ದ್ವಾರಾ ಭರಾ ಜಾತಾ ಹೈ ಜೋ ಕಾಯದೆ ಕಿ ಸೌಂದರ್ಯ ಕೊ ದ್ವಿಗುಣಿತ ಕರ ದೇತಾ ಹೈ ಪೂರಾ ಕಾಯದಾ ಇಸ ಪ್ರಕಾರ ಹೈ.

| | | | | | | | | |
|---|---|---|---|---|---|---|---|---|
| ಧಾऽಕ್ಡ | ಧಾತಿಟ, | ಧಾಗೆತಿ | ರಕಿಟ | । | ಧಾಧಾಗೆ | ಗೆತಕ | ಧಿನಧಿ | ನಾಗೆನಾ |
| x | | | | | ೨ | | | |
| ತಾऽಕ್ಡ | ತಾತಿಟ | ತಾಕೆತಿ | ರಕಿಟ | । | ಧಾಧಾಗೆ | ಗೆತಕ | ಧಿನಧಿ | ನಾಗೆನಾ"[2] |
| 0 | | | | | ೩ | | | |

ಅನುವಾದ : ಈ ಘರಾಣೆಯ ವಾದನ ಶೈಲಿಯಲ್ಲಿ (ಡಗ್ಗಾ)ದಲ್ಲಿ ಮೀಂಡಯುಕ್ತವಾದ ಬೋಲುಗಳನ್ನು ನುಡಿಸುವುದು ಹಾಗೂ ತಬಲಾ ನುಡಿಸುವಾಗ ಯಾವ ರೀತಿ ಮಿಂಡದ

---

೧. ಗ್ರಂಥ, "ಪಖವಾಜ ಔರ್ ತಬಲಾ ಏವಂ ಪರಂಪರಾಯೆ" ಲೇ.ಅಬಾನ ಈ ಮೀಸ್ತ್ರಿ ಪುಟ. ೧೮೧, ಪ್ರಕಾಶನ ೨೦೦೦

೨. ಅದೇ, ಪುಟ-೧೫೫ ಪ್ರಕಾಶನ-೨೦೦೦.

ಕೆಲಸಗಳನ್ನು ಪ್ರಥಮ ಎರಡು ಮಾತ್ರಾ ಧಾऽಕ್ಡದಲ್ಲಿ ಮಾಡಲಾಗುತ್ತದೆಯೋ ಹಾಗೆಯೇ ಇದರಲ್ಲಿ 'ಧಾ' ದ ನಂತರ ೧/೩ ಮಾತ್ರದ ವಿರಾಮ ಎಡಗಡೆಯ ಮಿಂಡದ ಮುಖಾಂತರ ತುಂಬಲಾಗುತ್ತದೆ. ವಿರಾಮ ಕೊಟ್ಟು ನುಡಿಸುವದರಿಂದ ಕಾಯದಾದಲ್ಲಿ ಸೌಂದರ್ಯ ಕಂಡು ಬಂದು ಜನರ ಮೆಚ್ಚುಗೆಯನ್ನು ತಬಲಾ ಕಲಾಕಾರನು ಪಡೆಯುವಂತಾಗುತ್ತದೆ. ಉದಾ: ಈ ಕೆಳಗಿನ ಒಂದು ಕಾಯದಾವನ್ನು ನೋಡಬಹುದು.

ಧಾऽಕ್ಡ ಧಾತಿಟ ಧಾಗೆತಿ ರಕಿಟ। ಧಾಧಾಗೆ ಗೆತಕ ಧಿನಧಿ ನಾಗಿನಾ।
X ೨
ತಾऽಕ್ಡ ತಾತಿಟ ತಾಕಿತಿ ರಕಿಟ। ಧಾಧಾಗೆ ಗೆತಕ ಧಿನಧಿ ನಾಗೆನಾ।"[೧]
0 ೩

೩. ಇಲ್ಲಿಯ ತನಕ ದಿಲ್ಲಿ ತಬಲಾ ವಾದನದಲ್ಲಿ ಮಧ್ಯಮ ಹಾಗೂ ತರ್ಜನಿ ಬೆರಳಿನ ಪ್ರಯೋಗವು ಮಾತ್ರ ಆಗುತ್ತದೆ. ಆದರೆ ಈ ಘರಾಣೆಯಲ್ಲಿ ಉಸ್ತಾದರು ಡಗ್ಗಾ ಹಾಗೂ ತಬಲಾದಲ್ಲಿ ಇವೆರೆಡೂ ಬೆರಳಿನ ಪ್ರಯೋಗವಲ್ಲದೇ ಅನಾಮಿಕ ಬೆರಳಿನ ಪ್ರಯೋಗವನ್ನು ಕೂಡಾ ಮಾಡ ತೊಡಗಿದರು. ಈ ಒಂದು ಹೊಸದಾದ ಪ್ರಯೋಗದಿಂದ ಕೆಲವು ಬೋಲುಗಳು ಅಂದರೆ "ದಿನಗಿನ" ಅತ್ಯಂತ ಸರಳತೆಯಿಂದ ದೃತ ಲಯದಲ್ಲಿ ಬಾರಿಸಲು ಪ್ರಯೋಜನಕಾರಿಯಾಗಿ ಪರಿಣಮಿಸಿದವು. ಈ ಬೋಲಿನಲ್ಲಿ ಮೊದಲು "ನ"ವನ್ನು ತರ್ಜನಿ ಬೆರಳಿನ ಸಹಾಯದಿಂದ ತಬಲಾ ಚಾಟದ ಮೇಲೆ ನುಡಿಸಿ ನಂತರ ಎರಡನೇಯದಾಗಿ ಅನಾಮಿಕಾ ಬೆರಳಿನ ಸಹಾಯದಿಂದ ಶಾಹಿಯ ಪೂರ್ವಭಾಗದಿಂದ ಬೋಲುಗಳನ್ನು ತಬಲಾದಲ್ಲಿ ನುಡಿಸತೊಡಗಿದರು.

೪. ಇಲ್ಲಿ ವಿವಿಧ ರೀತಿಯ ಹಾಗೂ ಅತ್ಯಂತ ಸುಂದರವಾದ ಕಾಯದಾಗಳು ವಿಶೇಷವಾಗಿ ಪ್ರಸಿದ್ಧವಾಗಿವೆ. ಇಲ್ಲಿಯ ಕಾಯದಾಗಳು 'ಧಾ' ಮತ್ತು 'ಧಿಂ' ಅಲ್ಲದೇ ಕತ್, ತ್ರಿ, ದಿಗನ್, ಘೆನಕ, ಮುಂತಾದ ಅಕ್ಷರಗಳಿಂದ ಆರಂಭವಾಗುತ್ತವೆ. ಹೀಗೆ ಬೇರೆ ಘರಾಣೆಯಲ್ಲಿ ಇಂತಹ ಕಾಯದಾಗಳು ಕಡಿಮೆ.

೫. "ಇಸ ಘರಾನೆ ಕೆ ಕುಛ ಕಾಯದೊ ಮೆ ಏಕ ಔರ್ ವಿಶೇಷತಾ ದೇಖನೆ ಕೊ ಮಿಲತಿ ಹೈ ಜೊ ಕಾಯದೆ ಕೆ ಉತ್ತರಾರ್ಧ ಅರ್ಥಾತ್ ಖಾಲಿ (ಮುಂದಿ) ಸೆ ಸಂಬಂಧಿತ ಹೈ, ಅಧಿಕಾಂಶ ಕಾಯದೆಕಿ ಉತ್ತರಾರ್ಧಕಾ ಭಾಗ ಪೂರ್ವಾರ್ಧ ಕಾ ಬಂದ (ಬಾಯಾ ರಹಿತ) ಹಿ ಹೋತಾಹೈ ಜೊ ನಿಮ್ನ ಕಾಯದೇಸೆ ಸ್ಪಷ್ಟ ಹೋ ಜಾಯೆಗಾ:"[೨]

ಧಾऽಗೆ ಗೆನಕ ಧಿಟಧಿ ಟಕಿಟ। ಧಾಧಾಗೆ ಗೆನಕ ತಿನತಿ ನಕಿನ।
X ೨
ತಾऽಕೆ ಕೆನಕ ತಿಟತಿ ಟಿಕಿಟ। ಧಾಧಾಗೆ ಗೆನಕ ಧಿನಧಿ ನಗಿನ।
0 ೩

---

೧. ಗ್ರಂಥ. "ಪಖವಾದ ಔರ ತಬಲಾಕೆ ಘರಾನೆ ಏವಂ ಪರಂಪರಾಯೆ" ಲೇ. ಅಬಾನ ಈ ಮಿಸ್ತ್ರಿ. ಪುಟ. ಸಂಖ್ಯೆ. ೧೪೧ ಪ್ರಕಾಶನ. ೨೦೦೦.

೨. ಅದೇ. ೧೪೧, ೧೪೨.

**ಅನುವಾದ:** ಈ ಘರಾಣೆಯಲ್ಲಿ ಕಾಯದಾಗಳಲ್ಲಿ ಮತ್ತೊಂದು ವೈಶಿಷ್ಟ್ಯ ನೋಡುವದಕ್ಕೆ ಸಿಗುತ್ತದೆ. ಇದು ಕಾಯದಾದ ಉತ್ತರಾರ್ಧ ಅರ್ಥಾತ್ ಖಾಲಿಗೆ ಸಂಬಂಧ ಪಟ್ಟದ್ದಾಗಿದೆ. ಹೆಚ್ಚಾಗಿ ಕಾಯದಾದ ಉತ್ತರಾರ್ಧದ ಭಾಗ ಪೂರ್ವಾರ್ಧದ ಬಂದ ( ಎಡಗೈ ರಹಿತ) ವೇ ಆಗಿರುತ್ತದೆ. ಇದು ವಿರಾಮ ಕಾಯದಾದಿಂದ ಸ್ಪಷ್ಟವಾಗಿರುತ್ತದೆ.

ಉದಾ:

| | | | | |
|---|---|---|---|---|
| x | ಧಾಽಗೆ | ಗೆನಕ | ಧಿಟಧಿ | ಟಕಿಟ । |
| ೨ | ಧಾಧಾಗೆ | ಗೆನಕ | ತಿನತಿ | ನಕಿನ । |
| 0 | ತಾಽಕೆ | ಕೆನಕ | ತಿಟತಿ | ಟಕಿಟ । |
| ೩ | ಧಾಧಾಗೆ | ಗೆನಕ | ಧಿನಧಿ | ನಗಿನ । |

"ಇಸಕೆ ವಿಪರೀತ ಅಜರಡೆ ಕೆ ತಿಶ್ರ ಜಾತಿ ಕೆ ನಿಮ್ನ ಪ್ರಸಿದ್ಧ ಕಾಯದೆ ಕೊ, ದೇಖಿಯೆ ಇಸಮೆ ಉತ್ತರಾರ್ಧ ಕಾ ಭಾಗ ಅನ್ಯ ಕಾಯದೊ ಸೆ ಭಿನ್ನ ಹೈ.

| | | | | |
|---|---|---|---|---|
| X | ಧಾಧಾಧಾ | ಧಿನಧಾಽಧಿನ | ಧಾಧಾಗೆಗೆತಕ | ಧಿನಧಿನಾಗೆನಾ । |
| ೨ | ಧಿನಾಧಾಽಧಿನ | ಧಾಗೆತಿರಕಿಟ | ಧಾಧಾಗೆಗೆತಕ | ಧಿನಧಿನಾಗೆನಾ । |
| 0 | ತಿಂಽನಾಽನ | ತಾಕೆತಿರಕಿಟ | ತಾತಾಕೆಕೆತಕ | ತಿನತಿನಾಕೆನಾ । |
| ೩ | ಧಿನಧಾಽಧಿನ | ಧಾಗೆತಿರಕಿಟ | ಧಾಧಾಗೆಗೆತಕ | ಧಿನಧಿನಾಗೆನಾ । |

ಉಪರ್ಯುಕ್ತ ಕಾಯದೆ ಮೆ ಖಾಲಿ ಕೆ ಬೋಲೊ ಮೆ ತಾತಾತಾ ತಿಂತಾತಿಂ ಕೆ ಸ್ಥಾನ ಪರ ತಿಂ ತಿಂಽಽನಾಽನ ತಾಕೆತಿರಕಿಟ ಬೋಲ ಲಗಾಯೆ ಗಯೆ ಹೈ ಔರ ಯಹಿ ಜೊ ಕಾಯದೆ ಕೆ ಸಾಧಾರಣ ನಿಯಮೊಸೆ ಹಟ ಕರ ಹೈ'. ಔರ ಯಹಿ ಇನ ಘರಾನೆ ಕಿ ವಿಶೇಷತಾ ಹೈ."[೧]

**ಅನುವಾದ :** ಇದಲ್ಲದೇ ಅಜರಡಾ ಘರಾಣೆಯ ತಿಶ್ರಜಾತಿಯ ವಿರಾಮದಿಂದ ಕೂಡಿದ ಪ್ರಸಿದ್ಧ ಕಾಯದಾವನ್ನು ನೋಡೋಣ. ಇದರಲ್ಲಿ ಉತ್ತರಾರ್ಧ ಭಾಗವು ಅನ್ಯ ಕಾಯದಾದಿಂದ ಭಿನ್ನವಾಗಿದೆ.

| | | | | |
|---|---|---|---|---|
| x | ಧಾಧಾಧಾ | ಧಿನಧಾಽಧಿನ | ಧಾಧಾಗೆಗೆತಕ | ಧಿನಧಿನಾಗೆನಾ |
| ೨ | ಧಿನಧಾಽಧಿನ | ಧಾಗೆತಿರಕಿಟ | ಧಾಧಾಗೆಗೆತಕ | ಧಿನಧಿನಾಗೆನಾ |
| 0 | ತಿಂಽಽನಾಽ ನ | ತಾಕೆತಿರಕಿಟ | ತಾತಾಕೆಕೆತಕ | ತಿನತಿನಾಕೆನಾ |
| ೩ | ಧಿನಧಾಽಧಿನ | ಧಾಗೆತಿರಕಿಟ | ಧಾಧಾಗೆಗೆತಕ | ಧಿನಧಿನಾಗೆನಾ |

ಈ ಕಾಯದಾದಲ್ಲಿ ಖಾಲಿಯಲ್ಲಿ ನುಡಿಸುವಂತಹ ಬೋಲುಗಳು ತಾತಾತಾ ತಿಂತಾತಿಂ

---

೧. ಗ್ರಂಥ "ಪಖವಾಜ ಔರ ತಬಲಾ ಕೆ ಘರಾಣೆ ಏವಂ ಪರಂಪರಾಯೇ". ಲೇ. ಡಾ. ಅಬಾನ. ಈ. ಮೀಸ್ತ್ರಿ, ಪುಟ. ಸಂಖ್ಯೆ. ೧೪೨. ಪ್ರ: ೨೦೦೦.

ಸ್ಥಾನದಲ್ಲಿ ತಿಂऽऽನಾऽನ ತಾಕೆತಿರಕಿಟ ಬೋಲನ್ನು ಹಚ್ಚಲಾಗಿದೆ ಇದು ಬೇರೆ ಕಾಯದಾಗಳಿಗಿಂತ ಭಿನ್ನವಾಗಿದೆ ಮತ್ತು ಇದೇ ಈ ಘರಾಣೆಯ ವೈಶಿಷ್ಟ್ಯ.

೬. ಈಗ ಈ ವಾದನ ಶೈಲಿಯ ಸ್ವತಂತ್ರವಾದನ ಹಾಗೂ ಸಂಗೀತದಲ್ಲಿ ಇದರ ಉಪಯೋಗದ ಬಗ್ಗೆ ವಿಚಾರ ಮಾಡೋಣ

ಸ್ವತಂತ್ರವಾದನವನ್ನು ನುಡಿಸಲಿಕ್ಕೆ ಈ ಘರಾಣೆಯು ಅತ್ಯಂತ ಸಫಲವಾಗಿದೆ ಯಾಕೆಂದರೆ ಇಲ್ಲಿ ಯಾವ ವಾದನದ ದರ್ಶನವಾಗುತ್ತದೆಯೋ ಅದಕ್ಕೆ ಗುನಿಜನರು ಶುದ್ಧ ತಬಲಾ ವಾದನವೆಂದು ಮನ್ನಿಸುತ್ತಾರೆ. ಈ ವಾದನ ಶೈಲಿಯು ಅತ್ಯಂತ ಕಠಿಣವಾಗಿದೆ ಆದ್ದರಿಂದ ಇದನ್ನು ಹೆಚ್ಚಾಗಿ ಗುನಿಜನಗಳ ಮುಂದೆಯೇ ಹೆಚ್ಚು ನುಡಿಸಲಾಗುತ್ತದೆ ಹಾಗೂ ವಿಚಿತ್ರವಾದ ಲಯಕಾರಿ ಕಾಯದಾಗಳನ್ನು ಶ್ರೋತೃಗಳ ಮುಂದೆ ನುಡಿಸುವುದರಿಂದ ವಿಶೇಷ ಆಕರ್ಷಣೆಯನ್ನು ಉಂಟುಮಾಡುತ್ತದೆ.

ತಬಲಾ ವಿಶೇಷವಾಗಿ ಸಂಗತದ ವಾದ್ಯವಾಗಿದೆ ಅಲ್ಲದೇ ಪ್ರತ್ಯೇಕವಾದ ಗಾಯನ ಶೈಲಿ, ವಾದನ ಶೈಲಿಯ ಹಾಗೂ ನೃತ್ಯದ ಜೊತೆಗೆ ಸರಿಯಾಗಿ ಸಂಗತ ಮಾಡುವ ಗುಣಗಳನ್ನು ಹೊಂದುವ ಬಾಜಗೇನೇ ಒಂದು ಸಫಲ ವಾದ ಬಾಜ ಎಂದು ಮನ್ನಿಸಲಾಗುತ್ತದೆ. ಈ ಮೂರು ಸಂಗೀತದಲ್ಲಿ ಅಂದರೆ ಗಾಯನ, ವಾದನ, ನೃತ್ಯ ಇದರಲ್ಲಿ ಅಜರಡಾ ಘರಾಣೆಯು ಪೂರ್ಣವಾಗಿ ಸಫಲವಾಗಿಲ್ಲ. ಗಾಯನ, ವಾದನದ ಕೆಲವು ವಿಧಾನಗಳು ಮತ್ತು ಕಥಕ ನೃತ್ಯದ ತಬಲಾ ಸಂಗತಿಯಲ್ಲಿ ಈ ಘರಾಣೆ ಪೂರ್ಣವಾಗಿ ಉಪಯೋಗವಾಗುವುದಿಲ್ಲ. ಯಾಕೆಂದರೆ ಇದರಲ್ಲಿ ಖುಲ್ಲಾ, ಜೋರದಾರಿ ಪರನ್, ತುಕಡಾ, ಚಕ್ರದಾರ, ಮುಂತಾದವುಗಳ ಅಭಾವವಿದೆ. ಆದ್ದರಿಂದ ಆಧುನಿಕ ಯುಗದಲ್ಲಿ ಸಫಲವಾದ ವಾದಕರು ತಮ್ಮ ಅಜರಡಾ ವಾದನದಲ್ಲಿ ಪೂರಬ ಶೈಲಿಯ ಅನುಕರಣೆಯನ್ನು ಮಾಡತೊಡಗಿದರು. ಇದೇ ಘರಾಣೆಯಲ್ಲಿ ಮೇರಠದ ಉಸ್ತಾದ ಶಮ್ಮು ಖಾನ ಮತ್ತು ಇವರ ಪುತ್ರರಾದ ಉಸ್ತಾದ ಹಬೀಬುದ್ದೀನ್ ಖಾನ ಸಾಹೇಬರ ಹೆಸರು ವಿಶೇಷವಾಗಿ ಉಲ್ಲೇಖವಾಗಿದೆ.

**ಪೂರಬ ಘರಾಣೆಯ ಪರಂಪರೆ :**

ಈ ಘರಾಣೆಯ ಮೂಲ ಪುರುಷರು ಮೋದುಖಾನ ಹಾಗೂ ಬಖ್ಖುಖಾನ ಲಖನೌದ ನವಾಬ ವಾಜಿದ ಅಲಿ ದಿಲ್ಲಿಯಿಂದ ಉಸ್ತಾದ ಮೋದು ಖಾನ ಮತ್ತು ಬಖ್ಖುಖಾನ ಅವರನ್ನು ಲಖನೌಗೆ ಆಮಂತ್ರಿಸಿದರು. ಹೀಗೆ ಆಮಂತ್ರಿಸಲ್ಪಟ್ಟ ಉಸ್ತಾದ ಮೋದುಖಾನ ಹಾಗೂ ಬಖ್ಖುಖಾನರು ಅಲ್ಲಿಯೇ ಉಳಿದು ತಮ್ಮ ಮೂಲವಾದನ ಶೈಲಿಯಲ್ಲಿ ಪರಿವರ್ತನೆ ಮಾಡಿ ಪೂರಬ ಘರಾಣೆಯ ಉತ್ಪತ್ತಿಗೆ ಕಾರಣರಾದರು. ಈ ವಂಶದ ಗುರುಗಳು ಮಮ್ಮುದಾ ಖಾನ ಇವರ

ಪುತ್ರರಾದ ಮಹಮ್ಮದ ಖಾನರು ಪ್ರಸಿದ್ಧ ತಬಲಾ ವಾದಕರಾಗಿದ್ದರು. ಮಹಮ್ಮದ ಖಾನರ ಪುತ್ರರಾದ ಮುನ್ನೇಖಾನ ಪ್ರಸಿದ್ಧ ತಬಲವಾದಕರಾಗಿದ್ದರು. ಮಹಮ್ಮದ ಖಾನರ ಪುತ್ರರಾದ ಮುನ್ನೆಖಾನ ಮತ್ತು ಅಬೀದ ಹುಸೇನ ಖಾನರು ಸಹ ಒಳ್ಳೆಯ ತಬಲಾವಾದಕರಾಗಿದ್ದರು. ಮುನ್ನೇಖಾನರ ಪುತ್ರರಾದ ವಾಜಿದ ಹುಸೇನಖಾನರೂ ಇತ್ತೀಚಿಗಿನ ಲಖನೌ ಬಾಜಿನ ಗುರುಗಳಾಗಿದ್ದಾರೆ. ಬಹುಶಃ ಪಂ ಬೀರುಮಿಶ್ರರು ಅಬೀದ ಹುಸೇನ ಖಾನರ ಶಿಷ್ಯರಲ್ಲಿ ಬನಾರಸದ ಪ್ರಸಿದ್ಧ ತಬಲಾ ವಾದಕರಿದ್ದರು. ಕಲಕತ್ತೆಯ ಹರೀಂದ್ರ ಗಂಗೋಲಿ ಮತ್ತು ಇಂದೋರಿನ ಜಹಾಂಗೀರ ಖಾನ ಮುತಾದವರು ಇವರ ಶಿಷ್ಯರಾಗಿದ್ದಾರೆ.

ಪ್ರಪ್ರಥಮ ತಬಲಾ ದಿಲ್ಲಿಯಿಂದ ಲಖನೌಗೆ ಬಂದಿತು. ಲಖನೌ ನಗರ ದಿಲ್ಲಿಯ ಪೂರ್ವದಲ್ಲಿ ಇರುವದರಿಂದ ಇದಕ್ಕೆ ಪೂರಬ ಘರಾಣೆ ಮತ್ತು ಈ ವಾದನ ಶೈಲಿಗೆ ಪೂರಬ ಬಾಜ ಎಂದು ಹೆಸರಾಯಿತು. ಇದರನಂತರದ ಫರೂಖಾ ಬಾದ ಮತ್ತು ಬನಾರಸ ಘರಾಣಾಗಳು ಪೂರಬ ಘರಾಣೆಯ ಕೊಡುಗೆಯಾಗಿವೆ.

**ಲಖನೌ (ಪೂರಬ) ಘರಾಣೆಯ ವೈಶಿಷ್ಟ್ಯತೆಗಳು :**

೧. ಲಖನೌ ಘರಾಣೆಯು ದಿಲ್ಲಿ ಘರಾಣೆಯ ಮೂಲದಿಂದಲೇ ಅಸ್ತಿತ್ವದಲ್ಲಿ ಬಂದಿತು. ಕಲಾಕಾರರು ದಿಲ್ಲಿಯಿಂದ ತಮ್ಮ ಜೊತೆಗೆ ಅಲ್ಲಿಯ ವೈಶಿಷ್ಟ್ಯಗಳೆಲ್ಲವನ್ನು ತಂದರು. ಸಮಯಾನುಸಾರ ಲಖನೌ ಘರಾಣೆಯಲ್ಲಿ ಸಂಗೀತದ ಆವಶ್ಯಕತೆಗಳೊಡನೆ ಹೊಂದಾಣಿಕೆ ಮಾಡಿಕೊಳ್ಳುವುದು ಅನಿವಾರ್ಯವಾಯಿತು. ದಿಲ್ಲಿಯ ನಿಬಂಧನೆಗಳು ಸಡಿಲಗೊಂಡು ನೃತ್ಯ ಮತ್ತ ಪಖವಾಜಗಳಿಗೆ ಹೊಂದಿಕೊಳ್ಳುವಂತೆ ಖುಲ್ಲಾ ಮತ್ತು ಜೋರದಾರ ರೀತಿಯಲ್ಲಿ ವಿಕಾಸಗೊಂಡಿತು.

೨. "ಯಹಾ ಚಾಂಟಿ ಕಿ ಅಪೇಕ್ಷಾ ಶಾಹಿ ಕಾ ಪ್ರಯೋಗ ತಥಾ ಲವ ಸೆ ಧ್ವನಿ ಕೆ ನಿರ್ಮಾಣ ಕಿ ಪ್ರಥಾ ಹೈ"[೧]

**ಅನುವಾದ:** ಈ ಘರಾಣೆಯಲ್ಲಿ ಕಿನಾರಾ ಪ್ರಯೋಗವಲ್ಲದೆ ತಬಲಾ ಕರಣಿ ಹಾಗೂ ಲವದಿಂದ ಧ್ವನಿಯನ್ನು ಸೃಜಿಸುವ ರೂಢಿ ಇದೆ.

೩. ಈ ಬಾಜಿನಲ್ಲಿ ತಬಲಾ ವಾದನವನ್ನು ಎರಡು ಬೆರಳಿನ ಸ್ಥಾನದಲ್ಲಿ ಐದೂ ಬೆರಳುಗಳು ಪ್ರಯೋಗಿಸಲ್ಪಡುತ್ತವೆ. ಎಡಗೈ ಹದಡವನ್ನು ಗೀಜ ಮಧುರ ಮೀಂಡ ತೆಗೆಯುವ ಪದ್ಧತಿಯು ಇದೆ.

---

೧. ಗ್ರಂಥ "ಪಖವಾಜ ಔರ ತಬಲಾ ಕೆ ಘರಾನೆ ಎವಂ ಪರಂಪರಾಯೆ". ಲೇ- ಆಬಾನ ಈ ಮಿಸ್ತ್ರಿ ಪುಟ-೧೫೦ ಪ್ರಕಾಶ-೨೦೦೦.

೪. ಲಖನೌ(ಪೂರಬ) ಘರಾಣೆಯ ಕಾಯದಾಗಳು ದಿಲ್ಲಿ ಮತ್ತು ಅಜರಡಾ ಘರಾಣೆಗಳ ಕಾಯದಾಗಳಿಗಿಂತ ಭಿನ್ನವಾಗಿರತ್ತವೆ. ಈ ಘರಾಣೆಯಲ್ಲಿ ಕಾಯ್ದಾಗಳಲ್ಲದೆ ಬೇರೆ ಬೇರೆ ಲಯಕಾರಿಯುಳ್ಳ ತುಕಡಾಗಳು, ನವಹಕ್ಕಾ, ಪರನ್, ಗತಪರನ್, ಬೇರೆ ಬೇರೆ ಚಕ್ರದಾರ ಹಾಗೂ ಗತ್ತ, ಫರದ,ಸಾತ್ವಿಕ ಪರನ್ (ಸ್ತುತಿ ಅಥವಾ ಶ್ಲೋಕ ಪರನ್) ಈ ಮುಂತಾದ ಸುಂದರ ರಚನೆಗಳು ಪ್ರಾಮುಖ್ಯವಾಗಿವೆ.

೫. ಈ ವಾದನ ಶೈಲಿಯಲ್ಲಿ ತಗನ್ನ, ದಿಂಗ, ನಗನಗ, ಧಡನ್ನ, ದೆತೆದೆತ, ಧಿಟ ಧಿಟ ಕ್ಡಧಾತಿಟ, ಗಿಡನಗ, ಗಿಡಾSನ, ಗಿಂತರಾSನ ಮುಂತಾದ ಬೋಲುಗಳ ಪ್ರಯೋಗ ಬಹಳವಾಗಿರುತ್ತದೆ ಈ ವಾದನ ಶೈಲಿಯಲ್ಲಿ ಮುಖ್ಯವಾಗಿ ಧಿಟ ತಿಟ ತಾಗೆತಿಟ ಕ್ಡಧಾತಿಟ ತಾಗಿತಿಟ ಬೋಲುಗಳು ಹೆಚ್ಚು ಕಂಡುಬರುತ್ತವೆ.

೬. ಈ ಘರಾಣೆಯ ಮೇಲೆ ಪಂಜಾಬ ಘರಾಣೆಯ ಸ್ವಲ್ಪ ಪ್ರಭಾವ ಕಂಡುಬರುತ್ತದೆ. ಈ ಘರಾಣೆಯ ಪ್ರವರ್ತಕನಾದ ಮೋದು ಖಾನ ಇವರ ಪತ್ನಿ ಪಂಜಾಬ ಘರಾಣೆಯ ಗುರು ಪುತ್ರಿಯಾಗಿದ್ದು ಮೋದು ಖಾನರಿಗೆ ಕೆಲವು ಪಂಜಾಬಗತ್ತುಗಳು ವರದಕ್ಷಿಣೆಯಾಗಿ ದೊರೆತವು ಎಂದು ಹೇಳಲ್ಪಡುತ್ತವೆ ಇವಕ್ಕೆ "ದಹೇಜ ಗತ್ತ" ಎನ್ನುತ್ತಾರೆ

೭. "ಠುಮ್ರಿ ಗಾಯನ ಶೈಲಿ ಕೆ ಜನ್ಮ ಔರ ವಿಕಾಸ ಮುಖ್ಯ ಕೇಂದ್ರ ಲಖನೌ ರಹಾ ಹೈ ಠುಮ್ರಿ ಕೆ ಸಾತ ಸಂಗತ ಕರನೇ ಮೆ ಲಗ್ಗಿ, ಲಡಿಯೊ ಕಾ ಪ್ರಯೋಗ ಅನಿವಾರ್ಯ ಹೋತಾ ಹೈ. ಸಾತ, ಯಹೀ ಕಾರಣ ಹೈ ಕಿ ಲಖನೌ ವಾದನ ಶೈಲೀಮೆ ಲಗ್ಗಿ ಲಡಿಯೋ ಕಾ ನಯಾ ಕಾಮ ಜುಡ ಗಯಾ ಜೊ ಉನ್ಹೋನೆ ಲೋಕ ವಾದ್ಯ ಶೈಲಿ ಸೆ ಗ್ರಯಣ ಕಿಯಾ ಹೋಗಾ."[೧]

**ಅನುವಾದ :** ಠುಮ್ರಿ ಗಾಯನ ಶೈಲಿಯ ಉಗಮ ಮತ್ತು ವಿಕಾಸಗಳಿಗೆ ಮುಖ್ಯ ಕೇಂದ್ರವೇ ಲಖನೌ ಆಗಿದೆ, ಠುಮ್ರಿ ಗಾಯನದ ಸಂಗತಿ ಲಗ್ಗಿ ಲಡಿಯನ್ನು ನುಡಿಸುವದು ವಿಶೇಷವಾಗಿದೆ. ಆದಕಾರಣ ಈ ಘರಾಣೆಯ ತಬಲಾ ವಾದಕರು ಲಗ್ಗಿ ಲಡಿಗಳನ್ನು ಅತ್ಯಂತ ಆಕರ್ಷಕ ರೀತಿಯಲ್ಲಿ ನುಡಿಸುತ್ತಾರೆ.

**ಫರೂಖಾಬಾದ ಘರಾಣಾ ಪರಂಪರೆ :**

ತಬಲಾವಾದನ ಕ್ಷೇತ್ರದಲ್ಲಿ ಲಖನೌ ಘರಾಣೆಯ ಮಹತ್ವದ ಬಗ್ಗೆ ಎಷ್ಟು ಹೇಳಿದರೂ ಕಡಿಮೆ. ಈ ಘರಾಣೆಯ ಶಾಖೆಗಳಾಗಿ ಒಂದು ಬನಾರಸದಲ್ಲಿ, ಇನ್ನೊಂದು ಫರೂಖಾಬಾದದಲ್ಲಿ ಸ್ಥಾಪಿತಗೊಂಡವು. ಲಖನೌ ಘರಾಣೆಯ ಹೆಸರಾಂತ ಕಲಾವಿದ ಬಖ್ಶು ಖಾನರ ಪ್ರತಿಭಾವಂತ ಶಿಷ್ಯ ವಿಲಾಯತಅಲಿ ಗುರು ಬಖ್ಶೂ ಖಾನರಿಂದ ಶಿಕ್ಷಣ ಪಡೆದು ಫರೂಖಾಬಾದಕ್ಕೆ ಹೋದರು

---

೧. ಪಖವಾದ ಔರ ತಬಲಾ ಕೆ ಘರಾಣೆ ಎವಂ ಪರಂಪರಾಯೇ ಲೇಖಕರು- ಡಾ. ಅಬಾನ ಈ ಮೀಸ್ತ್ರಿ ಪುಟ ಸಂಖ್ಯೆ -೧೫೦, ಪ್ರಕಾಶನ-೨೦೦೦.

ಮತ್ತು ಅಲ್ಲಿ ನೆಲಿಸಿ ತಬಲಾವಾದನದ ಬಹಳೇ ಪ್ರಚಾರ ಮಾಡಿದರು. ಉಸ್ತಾದ ವಿಲಾಯತ ಅಲಿಯವರು ಲಖನೌದ ವಾದನ ಶೈಲಿಯಲ್ಲಿ ಅರ್ಥಪೂರ್ಣ ಬದಲಾವಣೆಯನ್ನು ಮಾಡಿ ಮತ್ತು ಅನೇಕ ಹೊಸರೀತಿಯ ರಚನೆಗಳನ್ನು ಸಹ ಸಂಯೋಜಿಸಿ ಫರೂಖಾಬಾದದ ಘರಾಣೆಗೆ ಪ್ರತಿಷ್ಠೆಯನ್ನು ದೊರೆಕಿಸುವದರಲ್ಲಿ ಯಶಸ್ವಿಯಾದರು . ಇವರೇ ಮುಂದೆ ಹಾಜಿ ವಿಲಾಯತ ಅಲಿ ಖಾನ ಹೆಸರಿನಿಂದ ಪ್ರಖ್ಯಾತರಾದರು. ಅವರು ಉತ್ಕೃಷ್ಟ ತಬಲಾವಾದಕರು, ಜಾಣ ರಚನಾಕಾರರೂ ಅಲ್ಲದೆ ಕುಶಲ ಶಿಕ್ಷಕರೂ ಆಗಿದ್ದರು. ಅವರ ತಬಲಾವಾದನ ಬಹಳೇ ಗಡಚು ಹಾಗೂ ಲಯಕಾರಿಯುಕ್ತವಾಗಿತ್ತು. ಇಂಥ ಶ್ರೇಷ್ಠ ರಚನಾಕಾರರು ಶತಮಾನದಲ್ಲಿ ಒಬ್ಬರೇ ಜನಿಸುತ್ತಾರೆಂದು ಗಣ್ಯರ ಅಭಿಪ್ರಾಯ. ನೃತ್ಯ ಪ್ರಭಾವಿತ ಲಖನೌ ಘರಾಣೆಯಂತಾಗಲೀ ಬನಾರಸ ಘರಾಣೆಯಂತೆ ಖುಲ್ಲಾ ಶೈಲಿ ಅಥವಾ ದಿಲ್ಲಿ ಅಜರಡಾದಂತೆ ನಿರ್ಬಂಧಯುತ ಶೈಲಿ ಇವರ ವಾದನದಲ್ಲಿ ಪ್ರಭಾವ ಬೀರಲಿಲ್ಲ ಇವರು ತಮ್ಮ ವಾದನದಲ್ಲಿ ಚಾಟಿ ಮತ್ತು ಶಾಹೀಗಳಿಗೆ ಸಮಾನ ಮಹತ್ವಕೊಟ್ಟರು. ಈ ರೀತಿ ಇವರು ತಮ್ಮದೇ ಆದ ಬೇರೆ ಒಂದು ರೀತಿಯಲ್ಲಿ ಗತ್ತುಗಳನ್ನು ರಚಿಸಿ ಒಂದು ಹೊಸ ಘರಾಣೆಗೆ ಹುಟ್ಟು ಹಾಕಿದರು. ಅದೇ ಫರೂಖಾಬಾದ ಘರಾಣೆ ಎಂದೇ ಹೆಸರಾಗಿದೆ. ಇವರಿಂದ ರಚಿಸಲ್ಪಟ್ಟ ಗತ್ತುಗಳು ಅಪ್ರತಿಮವಾಗಿವೆ ಹಾಗೂ ಆಧುನಿಕ ತಬಲಾವಾದಕರು ಇವುಗಳನ್ನು ಮೆಚ್ಚಿಕೊಂಡು ಬಾರಿಸುವುದರಲ್ಲಿ ಹೆಮ್ಮೆ ಪಡುತ್ತಾರೆ. ಉಸ್ತಾದ ವಿಲಾಯತ ಅಲಿ ಖಾನರು ಅನೇಕ ಸಾರೆ ಹಜಯಾತ್ರೆಗೆ ಹೋದಾಗ ತಬಲಾ ವಿದ್ಯೆಯ ವರದಾನವನ್ನೇ ಕೇಳಿಕೊಳ್ಳುತ್ತಿದ್ದರೆಂದು ಹೇಳಲ್ಪಡುತ್ತದೆ. ಇವರಿಗೆ ನಾಲ್ಕು ಜನ ಪುತ್ರರು.೧) ನಿಸ್ಸಾರ ಅಲಿ ಖಾನ ೨) ಆಮಾನ ಅಲಿ ಖಾನ ೩) ಹುಸೇನ ಅಲಿ ಖಾನ ೪) ಉಸ್ತಾದ ನನ್ನೆ ಖಾನ ಮೂರನೇಯವರಾದ ಉಸ್ತಾದ ಹುಸೇನ ಅಲಿ ಖಾನ ಇವರ ಶಿಷ್ಯರಲ್ಲಿ ಉಸ್ತಾದ ಮುನೀರ ಖಾನ ಇವರ ಹೆಸರು ಉಲ್ಲೇಖನೀಯವಾಗಿದೆ.

**ಈ ಘರಾಣೆಯ ವೈಶಿಷ್ಟ್ಯತೆಗಳು :**

೧) ಈ ಘರಾಣೆಯು ಪೂರಬ ಘರಾಣೆಯ ಒಂದು ಶಾಖೆಯಾದರೂ ಲಖನೌ ಘರಾಣೆಯಂತೆ ನೃತ್ಯಗಳಿಂದ ಪ್ರಭಾವಿತವಾಗಿಲ್ಲ ಬನಾರಸ ಅಥವಾ ಪಂಜಾಬ ಘರಾಣೆಯಂತೆ ಜೋರದಾರಿಯಾಗಿ ಅಥವಾ ದಿಲ್ಲಿಯಂತೆ ಬಂಧನಕಾರಿಯಾಗಿಲ್ಲ.

೨) ಉಳಿದ ಘರಾಣೆಯಂತೆ ಇದರಲ್ಲಿಯೂ ಕಾಯದಾ, ಪೇಶಕಾರ ಮುಂತಾದವುಗಳು ಬಾರಿಸಲ್ಪಡುತ್ತವೆ. ರೇಲಾಗಳಿಗೆ ಈ ಘರಾಣೆಯವರು ಒಂದು ಹೊಸ ರೂಪ ಕೊಟ್ಟು ಅದಕ್ಕೆ "ರೌ" ಅಥವಾ ರವೀಶ ಎಂದು ನಾಮಕರಣ ಮಾಡಿದ್ದಾರೆ. ಗತ ಬಾರಿಸುವುದಕ್ಕೆ ಮಹತ್ವ ದೊರೆತದ್ದು ಈ ಘರಾಣೆಯಿಂದಲೇ. ಈ ಗತ್ತಗಳನ್ನು ಬೇರೆ ಬೇರೆ ಲಯಕಾರಿಗಳಲ್ಲಿ

ಬಾರಿಸುವ ಪದ್ಧತಿಯೂ ಪ್ರಚಲಿತವಿದೆ. ಅದಕ್ಕೆ ದರ್ಜಾಗತ ಎಂದು ಕರೆಯುವುದುಂಟು. ಈ ಘರಾಣೆಯ ವೈಶಿಷ್ಟ್ಯವೆನಿಸಿದ "ಚಾಲ" ಅಥವಾ "ಚಲನ" ಎಂಬುವು ಬೇರೆ ಯಾವ ಘರಾಣೆಯಲ್ಲಿ ಸಿಗುವುದಿಲ್ಲ.

೩) ತಬಲಾ ಸ್ವತಂತ್ರವಾದನವನ್ನು ನುಡಿಸಲಿಕ್ಕೆ (ಸೋಲೊ) ಬೇಕಾದ ವೈಶಿಷ್ಟ್ಯಗಳು ಈ ಘರಾಣೆಯ ಶೈಲಿಯಲ್ಲಿ ಲಭ್ಯವಿರುವದು. ಈ ಘರಾಣೆಯ ಸಫಲತೆಗೆ ಮುಖ್ಯಕಾರಣ; ಈ ಘರಾಣೆಯ ವಾದನ ಶೈಲಿಯಲ್ಲಿ ಗಿಡಾನ, ಧಿರಧಿರಕಿಟತಕತಕಿಟಧಾ, ತಕತಕ, ಧಿರದಿರಕಿಟತಕದೆತ್ತ, ಕ್ಡಾಂತ್ರಗ್ಡಾಂತ ಇವುಗಳ ಪ್ರಯೋಗವು ಅಧಿಕವಾಗಿರುತ್ತದೆ.

೪) "ಇಸ ಘರಾನೆ ಕಿ ಚರ್ಚಾ ಕರ್ತೆ ಹುಎ ಆಹಮದ ಜಾನ ತಿರಖ್ವಾ ನೆ ಕಹಾ ಥಾ ಕಿ ಫರಖ್ವಾಬಾದ ಕಾ ತಬಲಾ ಶುದ್ಧ ತಬಲಾ ಹೈ, ದುಸರೆ ಘರಾನೊಂಕಿ ಭಾಂತಿ ಉಸಮೆ ತಾಶಾಕೆ ಬೋಲ (ತಿಂತಿಂ) ನಕ್ಕಾರಾ ಕೆ ಬೋಲ (ನಾಡನಾಡ), ಡೋಲ ತಥಾ ಖಂಜರಿ ಕೆ ಬೋಲ ಇತ್ಯಾದಿ ನಹಿ ಮಿಲತೆ. ವಿವಿಧ ಸಾಜೋಂಕೆ ಬೊಲೋಂಸೆ ತಬಲೆ ಕಾ ವಿಸ್ತಾರ ತೊ ಅವಶ್ಯ ಹೋತಾ ಹೈ ಕಿಂತು ಶುದ್ಧತಾ ಖತ್ಮ ಹೋ ಜಾತಿ ಹೈ. ಜೋಭೀ ಹೋ ಕಿಂತು ಫರೂಖ್ವಾಬಾದ ಕಾ ತಬಲಾ ಮಧುರ, ಸಂಯತ ಏವಂ ಸಂತುಲಿತ ಹೈ ಇತನಾ ಮಾನನಾ ಪಡೇಗಾ."[೧]

**ಅನುವಾದ:** ಈ ಘರಾಣೆಯ ಬಗ್ಗೆ ಅಹಮದ್ ಜಾನ್ ತಿರಖ್ವಾ ಅವರ ಹೇಳಿಕೆ ಎಂದರೆ ಇದರಲ್ಲಿ ಬೇರೆ ಘರಾಣೆಗಳಂತೆ ತಾಶಾದ ಬೋಲುಗಳು; ನಕ್ಕಾರಾದ ಬೋಲು, ಢೋಲು, ಖಂಜರಿಗಳ ಬೋಲು ಮಿಶ್ರಿತವಾಗಿರುವದಿಲ್ಲ. ಫರೂಖಾಬಾದದ ತಬಲಾ ವಾದನ ಶೈಲಿ ಮಧುರವು; ಸಂಯಮವುಳ್ಳದ್ದು ಹಾಗೂ ಸಂತುಲಿತವಾದದ್ದಿರುತ್ತದೆ.

**ಬನಾರಸ ಘರಾಣೆಯ ಪರಂಪರೆ ಹಾಗೂ ವೈಶಿಷ್ಟ್ಯ :**

ಬನಾರಸ ಘರಾಣೆಯು ಒಂದು ಪ್ರತಿಷ್ಠಿತ ಘರಾಣೆಯಾಗಿದ್ದು ಪಂಡಿತ ರಾಮಸಹಾಯ ಜಿ ಮಿಶ್ರ ಇವರು ಈ ಘರಾಣೆಯ ಮೂಲಪುರುಷರು. ಇವರು ೧೯ನೆ ಶತಮಾನದಲ್ಲಿ ಇದ್ದರು. ಇವರು ತಮ್ಮ ತಬಲಾ ಶಿಕ್ಷಣವನ್ನು ಉಸ್ತಾದ ಮೋದುಖಾನರಲ್ಲಿ ಹನ್ನೆರಡು ವರ್ಷದ ವರೆಗೆ ಮಾಡಿ ಲಖನೌದಿಂದ ತಿರುಗಿ ತಮ್ಮ ಮೂಲ ಸ್ಥಾನವಾದ ಬನಾರಸಕ್ಕೆ ಬಂದರು. ಇವರಿಂದಲೇ ಬನಾರಸ ಘರಾಣೆಯ ಶೈಲಿಯು ಊರ್ಜಿತ ಗೊಂಡು ಅಸ್ತಿತ್ವದಲ್ಲಿ ಬಂದಿತು. ಪಂ. ರಾಮಸಹಾಯ ಜಿ. ಮಿಶ್ರರವರ ಶಿಷ್ಯಂದಿರಲ್ಲಿ ಐವರು ಇದ್ದಾರೆ. ಜಾನ ಕಿ. ಸಹಾಯ, ಬೈಜು ಮಹಾರಾಜ, ರಾಮಶರಣ ಜಿ, ಭಗತ ಜಿ ಮತ್ತು ಪರತಪ್ಪು ಮಹಾರಾಜ ನಂತರದಲ್ಲಿ ಈ ಘರಾಣೆಯ (೧೮೮೦

---

೧. ಪಖವಾಜ ಔರ ತಬಲಾ ಕೆ ಘರಾನೆ ಏವಂ ಪರಂಪರಾಯೆ. ಲೇ- ಆಬಾನ ಈ ಮಿಸ್ತ್ರಿ ಪುಟ-೧೫೯ ಪ್ರಕಾಶನ-೨೦೦೦.

ರಿಂದ ೧೯೬೬) ಉಲ್ಲೇಖನೀಯ ಕಲಾವಿದರಲ್ಲಿ ಮಹಾರಾಜ ಪಂ. ಗುದಯೀ ಮಹಾರಾಜ (ಸಮತಾ ಪ್ರಸಾದ) ಮುಂತಾದವರಾಗಿದ್ದಾರೆ.

**ವೈಶಿಷ್ಟ್ಯತೆಗಳು :**

೧. ಈ ಘರಾಣೆಯ ಶೈಲಿಯಲ್ಲಿ ಅನಾಮಿಕಾ ಬೆರಳಿನ ಪ್ರಯೋಗವು ಹಾಗೂ ತಬಲಾದ "ಲವ" ಹೆಚ್ಚಾಗಿ ಉಪಯೋಗಿಸಲ್ಪಟ್ಟಿದ್ದು ಕಂಡು ಬರುತ್ತದೆ.

೨. ಈ ಬನಾರಸ ಘರಾಣೆಯ ಶೈಲಿಯಲ್ಲಿ ಕಾಯ್ದಾಗಳಿಗಿಂತ ಹೆಚ್ಚು ಪ್ರಾಧಾನ್ಯತೆ ಉಠಾಣ, ಗತ, ಪರನ್, ಮೋಹರಾ, ಮುಖಡಾ, ರೇಲಾ, ಲಗ್ಗಿ, ಲಡಿ, ಬಾಂಟಗಳಿಗೆ ಕೊಡಲಾಗುತ್ತದೆ. ಇಲ್ಲಿ ಶ್ಲೋಕಗಳನ್ನು ಅಂದು ಅದಕ್ಕೆ ಹೋಲುವ ರೀತಿಯಲ್ಲಿ ತಬಲಾ ರಚನೆಗಳನ್ನು ನುಡಿಸುವುದುಂಟು.

೩. ಈ ಶೈಲಿಯವಾದನವು ನೃತ್ಯಕ್ಕೆ ಹಚ್ಚು ಸಂಬಂಧವಿಟ್ಟುಕೊಂಡಿದ್ದು ಇದರಲ್ಲಿ ತೋಡೆ, ಚಕ್ರದಾರ ಮುಂತಾದವುಗಳು ವಿಶೇಷವಾಗಿ ನುಡಿಸಲ್ಪಡುತ್ತವೆ. ಠೇಕಾದ ಪ್ರಕಾರ ಹಾಗೂ ಫರದ ಎಂಬ ಹೆಸರಿನ ವಿಶೇಷ ಪ್ರಕಾರದ ಗತ್ತು ಈ ಘರಾಣೆಯ ಮುಖ್ಯ ವೈಶಿಷ್ಟ್ಯವಾಗಿದೆ. ಫರದ ಗತ್ತ ಇದರ ಉದ್ಭವ ಮತ್ತು ಪ್ರಸಾರಣಗಳ ಶ್ರೇಯಸ್ಸು ಪಂ. ಬೈಜು ಮಹಾರಾಜ ಇವರಿಗೆ ಸಲ್ಲುತ್ತದೆ.

೪. ಈ ಘರಾಣೆಯಲ್ಲಿ ಎರಡು ಪ್ರಕಾರದ ಗತ್ತುಗಳು ಪ್ರಚಾರದಲ್ಲಿದ್ದು ಅವು ಹೀಗಿವೆ

೧. ಜನಾನಿಗತ್ತು

೨.ಮರದಾನಿಗತ್ತು

**೧. ಜನಾನಿ ಗತ್ತು :** ಇದು ಸೌಂದರ್ಯಮಯವಾಗಿದ್ದು ಕೈಯ ಅರ್ಧಭಾಗದಿಂದ ಅಂದರೆ ಬೆರಳುಗಳ ಭಾಗದಿಂದ ನುಡಿಸಲಾಗುತ್ತದೆ.

**೨. ಮರದಾನಿ ಗತ್ತು :** ಈ ಗತ್ತಿನಲ್ಲಿ ಜೋರದಾರಿ ಬೋಲುಗಳ ಪ್ರಯೋಗವು ಹೆಚ್ಚಾಗಿ ಕಂಡುಬರುತ್ತದೆ ಹಾಗೂ ಹದಡದ ಪ್ರಯೋಗವು ಕೂಡ ವಿಶೇಷವಾಗಿರುತ್ತದೆ.

೫. ಈ ಘರಾಣೆಯಲ್ಲಿ ತಬಲಾ ಸ್ವತಂತ್ರವಾದನವು ಉಠಾಣದಿಂದ ಪ್ರಾರಂಭವಾಗುತ್ತದೆ.

೬. ಈ ಘರಾಣೆಯ ಕಲಾವಿದರು ಧಾ.ಧಿಂ. ಧಿಂ ಧಾ ತೀನತಾಲ ಠೇಕಾವನ್ನು ಹೇಳುವಾಗ ನಾ.ಧಿಂ.ಧಿಂ ನಾ ಎಂದು ಹೇಳುವರು

೭. "ಬನಾರಸ ಬಾಜ ಮೆ ಲಖನೌಕಿ ಸಾರಿ ವಿಶೇಷತಾಯೇ ತೊ ಹೈ ಹಿ, ಅತಃ ತಬಲಾ ತಥಾ, ಪಖವಾಜ ದೋನೋಂಕೆ ವರ್ಣ ಏವಂ ಶಬ್ದ ಉಸಮೆ ಆ ಜಾತೆ ಹೈ ಸಾತಹೀ ನಕ್ಕಾರಾ, ಹುಡುಕ, ಡುಕ್ಕಡ ತಥಾ ಆದಿ ಕಿ ವಾದನ ಶೈಲಿ ಕಾ ಪ್ರಭಾವ ಭಿ ದೇಕನೆ ಕೊ ಮಿಲತಾ ಹೈ

**ಅನುವಾದ:** ಬನಾರಸ ಶೈಲಿಯಲ್ಲಿ ಲಖನೌ ಘರಾಣೆಯ ವೈಶಿಷ್ಟ್ಯತೆಗಳು ಕಂಡುಬಂದರೂ ಪಖವಾಜ ಬೋಲಿನ ಶಬ್ದಗಳು ನುಡಿಸಲ್ಪಡುತ್ತಿವೆ. ಜೊತೆಗೆ ನಕ್ಕಾರು ಹುಡುಕ, ಡುಕ್ಕಡ ಮತ್ತು ತಾಶಾ ಮುಂತಾದ ವಾದನ ಶೈಲಿಗಳ ಪ್ರಭಾವ ಇದರ ಮೇಲಾಗಿದೆ."[೧]

೮. ಈ ಘರಾಣೆಯಲ್ಲಿ ಡಗ್ಗಾ ತಿಕ್ಕಿ ಮಿಂಡ ತೆಗೆಯುವುದು ವಿಶೇಷವಾಗಿರುತ್ತದೆ ಮತ್ತು ತಬಲಾದಲ್ಲಿ ಬೊಲುಗಳ ಶಬ್ದಗಳನ್ನು ಸುಶ್ರಾವ್ಯವಾಗಿ ನುಡಿಸುವುದು ಬೇರೆ ಘರಾಣೆಗಳಿಗಿಂತ ಭಿನ್ನವಾಗಿದೆ. ಈ ವಾದನ ಶೈಲಿಯಲ್ಲಿ ಧಿಗ ಧಿನಾ, ಧಿಟ ತಿಟ, ಧೆಧೆಽಕ ಕೆಕೆನಕ, ದೆತ್‌ದೆತ್, ಕತಾಽನ, ಧಿನನಾನ, ಕಿಟಧಾನ, ಗದಿಗನ, ಕ್ಡಾನ, ಗ್ಡಾನ್, ಗಿಡಾನ, ಧಿರಧಿರ ಮುಂತಾದ ಶಬ್ದಗಳ ಪ್ರಯೋಗ ಹೆಚ್ಚಾಗಿರುತ್ತದೆ.

## ಪಂಜಾಬ ಘರಾಣೆಯ ಪರಂಪರೆ ಹಾಗೂ ವೈಶಿಷ್ಟ್ಯತೆ:

ಈ ಘರಾಣೆಯ ಪ್ರಭಾವ ಬೇರೆಡೆ ಕಂಡುಬಂದರೆ ಪಂಜಾಬ ಘರಾಣೆಗೆ ಮಾತ್ರ ಬೇರೆ ಯಾವುದೇ ಘರಾಣೆಯ ಪ್ರಭಾವವನ್ನು ಹೊಂದಿರದೆ. ತನ್ನದೇ ಆದ ವೈಶಿಷ್ಟ್ಯತೆಗಳ ಮೂಲಕ ಸ್ವತಂತ್ರವಾಗಿ ಬೆಳೆದುಬಂದ ಘರಾಣೆಯಾಗಿದೆ. ಈ ಘರಾಣೆಯ ಮೂಲ ಪ್ರವರ್ತಕ ಭವಾನಿ ದಾಸರಾಗಿದ್ದು. ದಿಲ್ಲಿ ಘರಾಣೆಯ ಪ್ರವರ್ತಕ ಉಸ್ತಾದ ಸಿದ್ಧಾರ ಖಾನ ಡಾಡಿಯ ಸಮಕಾಲೀನರಾಗಿದ್ದರು. ಕೆಲವರು ಇವರಿಗೆ ಭವಾನಿ ದೀನ ಎಂದೂ ಅನ್ನುತ್ತಾರೆ. ಇವರಿಗೆ ಐದು ಜನ ಪ್ರಮುಖ ಶಿಷ್ಯಂದಿರು. ಮಿಯಾ ಕಾದಿರ ಬಕ್ಷ, ಹದ್ದೂಖಾನ್ (ಲಾಹೋರ ವಾಲೆ), ತಾಜಖಾನ್ ಡೇರೇದಾರ, ಅಮೀರ ಅಲಿ, ಹಾಗೂ, ಅಜ್ಞಾತ ಶಿಷ್ಯ (ಹೆಸರು ಉಲ್ಲೇಖವಿಲ್ಲದಿದ್ದರು ಪರಂಪರೆಯು ಲಭ್ಯವಿದೆ.)

ಈ ಘರಾಣೆಯಲ್ಲಿ ಭವಾನಿ ದಾಸರ ಶಿಷ್ಯ ಪ್ರಮುಖ ಪಖವಾಜ ವಾದಕರಾದ ಮಿಯಾ ಕಾದಿರಬಕ್ಷರ ಶಿಷ್ಯ ಪರಂಪರೆ ಹೀಗಿದೆ.

೧. ಉಸ್ತಾದ ಮಿಯಾ ಹುಸೇನ ಬಕ್ಷ
೨. ಉಸ್ತಾದ ಮಿಯಾ. ಫಕೀರ ಬಕ್ಷ
೩. ಉಸ್ತಾದ ಕದೀರ ಬಕ್ಷ
೪. ಉಸ್ತಾದ ಅಲ್ಲಾರಾಖ
೫. ಉಸ್ತಾದ ಕರಾಮುಯಿಲಾಹಿ ಖಾನ
೬. ಉಸ್ತಾದ ಝಾಕೀರ ಹುಸೇನ
೭. ಶ್ರೀ. ಫಸಲ್ ಕುರೇಶಿ
೮. ಶ್ರೀ. ಯೋಗೇಶ ಸಮಶಿ

ಮುಂತಾದವರಾಗಿದ್ದಾರೆ.

---

೧. ಪಖವಾದ ಔರ ತಬಲಾ ಕೆ ಘರಾಣೆ ಎವಂ ಪರಂಪರಾಯೇ ಲೇಖಕರು- ಡಾ. ಅಬಾನ ಈ ಮೀಸ್ತ್ರಿ ಪುಟ ಸಂಖ್ಯೆ -೧೬೭, ಪ್ರಕಾಶನ ೨೦೦೦.

ವೈಶಿಷ್ಟ್ಯತೆಗಳು:

೧. "ಇಸ ಘರಾನೆ ಕಾ ಬಾಜ ಪಖವಾಜ ಸೆ ಅತ್ಯಧಿಕ ಪ್ರಭಾವಿತ ಹೋನೆ ಕೆ ಕಾರಣ ಜೋರದಾರ ಔರ ಖುಲ್ಲಾ ಹೈ, ಜಿಸಮೆ ಚಾರೊ, ಉಂಗಲಿಯೋಂಕೆ ಪ್ರಯೋಗ ಕೆ ಸಾತ ತಬಲೆ ಪರ ಥಾಪ ಕಾ ಭಿ ಪ್ರಯೋಗ ಹೋತಾ ಹೈ."[೧]

**ಅನುವಾದ :** ಈ ಘರಾಣೆಯ ವಾದನ ಶೈಲಿಯ ಮೇಲೆ ಪಖವಾಜದ ಅತ್ಯಧಿಕ ಪ್ರಭಾವ ಇರುತ್ತದೆ. ಥಾಪ ನುಡಿಸುವಾಗ ನಾಲ್ಕು ಬೆರಳುಗಳ ಪ್ರಯೋಗವಾಗುತ್ತದೆ.

೨. ಈ ಘರಾಣೆಯಲ್ಲಿ ನಾಲ್ಕು ಬೆರಳುಗಳು ಉಪಯೋಗವಾಗುತ್ತದೆ ಹಾಗೂ ಪಂಜಾಬ ಭಾಷೆಯ ಹಾಗೆ ಬೋಲುಗಳ ರಚನೆಗಳು ಕಂಡುಬರುತ್ತವೆ.

೩. ಪಂಜಾಬ ಘರಾಣೆಯಲ್ಲಿ ಕಾಯ್ದಾಗಳು ಕಡಿಮೆ ಇದ್ದರೂ ಅವು ನುಡಿಸಲಿಕ್ಕೆ ಕಠಿಣ ಹಾಗೂ ಲಯಕಾರಿಯುಕ್ತವಾಗಿವೆ. ಈ ಘರಾಣೆಯು ರೇಲಾ ಹಾಗೂ ಗತ್ತುಗಳಿಗೆ ಹೆಸರಾಗಿದೆ.

೪. ಈ ಘರಾಣೆಯ ಬಂದೀಶಗಳಲ್ಲಿ ಧಿನಾಡ, ಧಿಡಂತ, ಕ್ರತನ, ಧಾಡಾಗಿನ ಮುಂತಾದವು ಹಾಗೂ ಠೇಕಾಗಳಲ್ಲಿ ಧಾತಿಧಾಡಾ ಮತ್ತು ದೃತಗತಿಯಲ್ಲಿ ಧಿರಕಿಟ, ತಿರಕಿಟ, ಬೋಲುಗಳ ಪ್ರಯೋಗವಾಗುತ್ತದೆ.

೫. ಡಗ್ಗದಲ್ಲಿ ಮಿಂಡ ಕೆಲಸ ಮಾಡುವುದು ಮತ್ತು ತಬಲಾದಲ್ಲಿ 'ಚಿಪಕಾ'ವನ್ನು ನುಡಿಸುವುದು ಈ ಘರಾಣೆಯ ವೈಶಿಷ್ಟ್ಯವಾಗಿದೆ.

೬. ಪಂಜಾಬ ಪ್ರಾಂತವು ಗಡಿ ಸೀಮೆಯಲ್ಲಿ ಇದ್ದ ಕಾರಣ ಅಲ್ಲಿಯ ಜನಜೀವನದಲ್ಲಿ ತಮ್ಮ ಸಂರಕ್ಷಣೆ, ಯುದ್ಧದ ಅನಿವಾರ್ಯತೆಗಳು ಅಲ್ಲಿಯ ಸಂಗೀತದ ಮೇಲೆ ಪ್ರಭಾವ ಬೀರಿವೆ. ಆದ್ದರಿಂದ ಪಂಜಾಬದ ಸಂಗೀತ ಅತೀ ಜೋರದಾರ ಮತ್ತು ತೀವ್ರ ಗತಿಯುಕ್ತವಾಗಿರುತ್ತದೆ.

ಹೀಗೆ ಪಂಡಿತ ಬಸವರಾಜ ಬೆಂಡಿಗೇರಿಯವರು ಈ ವರೆಗೆ ವಿವರಿಸಿದ ಎಲ್ಲಾ ಘರಾಣೆಗಳ ವಾದನ ಶೈಲಿ ಯನ್ನು ಗುರುಗಳಾದ ಉಸ್ತಾದ ಮೆಹಬೂಬ ಖಾನ ಸಾಹೇಬ ಮಿರಜಕರವರ ಹತ್ತಿರ ಕಲಿತು ಅವುಗಳಲ್ಲಿ ವಿಶೇಷವಾಗಿ ಇವರು ದಿಲ್ಲಿ, ಅಜರಡಾ ಹಾಗೂ ಪೂರಬ ಘರಾಣೆಗಳ ಬಗ್ಗೆ ಹೆಚ್ಚಿಗೆ ಅಭ್ಯಾಸ ಮಾಡಿ ಈ ಮೂರು ಘರಾಣೆಗಳ ಶೈಲಿಯಲ್ಲಿ ಪ್ರವೀಣರಾದರು.

---

೧. ಪಖವಾದ ಔರ ತಬಲಾ ಕೆ ಘರಾಣೆ ಎವಂ ಪರಂಪರಾಯೇ ಲೇಖಕರು- ಡಾ. ಅಬಾನ ಈ ಮೀಸ್ತ್ರಿ ಪುಟ ಸಂಖ್ಯೆ -೧೭೩, ಪ್ರಕಾಶನ೨೦೦೦.

ಅಧ್ಯಾಯ -೪

# ಪಂಡಿತ ಬಸವರಾಜ ಬೆಂಡಿಗೇರಿಯವರ ಬಾಲ್ಯ ಮತ್ತು ಕೌಟುಂಬಿಕ ಹಿನ್ನೆಲೆ

ಪಂಡಿತ ಬಸವರಾಜ ಬೆಂಡಿಗೇರಿಯವರ ತಂದೆ ಶ್ರೀ ಶಂಕ್ರಪ್ಪ ತಾಯಿ ಶ್ರೀಮತಿ ಗಂಗಮ್ಮ. ಬೆಳಗಾಂವಿ ಸಮೀಪದ ಖಾಸಭಾಗ ಎಂಬಲ್ಲಿ ವಾಸವಾಗಿದ್ದರು. ತಂದೆ ಶಂಕ್ರಪ್ಪನವರು ಸ್ವಲ್ಪ ತಬಲಾ ಕಲೆ ಬಲ್ಲವರಾಗಿದ್ದರು. ಹಾಗೂ ಅಲ್ಲಲ್ಲಿ ಊರಲ್ಲಿ ಕೀರ್ತನೆ ಭಜನೆಗಳಿಗೆ ತಬಲಾವನ್ನು ನುಡಿಸುತ್ತಿದ್ದರು. ತಾಯಿ ಗಂಗಮ್ಮ ಸದ್ಗೃಹಿಣಿಯಾಗಿದ್ದರು. ಈ ದಂಪತಿಗಳಿಗೆ ಮದುವೆಯ ನಂತರ ಬಹಳ ಕಾಲ ಸಂತಾನ ಫಲ ಸಿಗದಿದ್ದರಿಂದ ಮನಃಶಾಂತಿ ಕಳೆದುಕೊಂಡು ಕೊರಗುತ್ತಿದ್ದರು. ಇವರ ಈ ಗೋಳಾಟವನ್ನು ದಿನಾ ನೋಡುತ್ತಿದ್ದ ಒಬ್ಬ ಹಿರಿಯರು " ತಾಯಿ ನೀವು ಅಥಣಿ ಶಿವಯೋಗಿಗಳ ಹತ್ತಿರ ಹೋಗಿರಿ. ಅವರು ಮಹಾ ತಪಸ್ವಿಗಳು ತ್ರಿಕಾಲ ಜ್ಞಾನವನ್ನು ಹೊಂದಿದವರು. ಅಂತಹ ಒಬ್ಬ ತಪಸ್ವಿಗಳ ಆಶೀರ್ವಾದದಿಂದ ನಿಮ್ಮ ಈ ಗೋಳು ದೂರವಾಗಬಲ್ಲದು'' ಎಂದು ಗಂಗಮ್ಮನಿಗೆ ಹಾಗೂ ಶಂಕ್ರಪ್ಪನವರಿಗೆ ಹೇಳಿ ಸಮಾಧಾನ ಮಾಡಿದರು. ಊರಿನ ಹಿರಿಯರ ಮಾತನ್ನು ಕೇಳಿ ಶಂಕ್ರಪ್ಪ ಹಾಗೂ ಗಂಗಮ್ಮನವರು ಮಹಾತ್ಮರಾದ ಅಥಣಿ ಶಿವಯೋಗಿಗಳ ದರ್ಶನಕ್ಕಾಗಿ ತೆರಳಿದರು. ಯೋಗಿಗಳ ದರ್ಶನವಾಯಿತು. ಆಗ ಈ ತಮ್ಮ ಅಳಲನ್ನು ಮಹಾ ತಪಸ್ವಿ ಹಾಗೂ ಜ್ಞಾನಿಗಳಾದ ಶಿವಯೋಗಿಗಳಲ್ಲಿ ತೋಡಿಕೊಂಡರು. ಶಿವಯೋಗಿಗಳ ಕೃಪಾಶೀರ್ವಾದ ಮೇರೆಗೆ ಸಾಂತ್ವನ ದೊರೆಯಿತು. ಶಿವಯೋಗಿಗಳು ಆಶೀರ್ವಾದ ಮಾಡಿ "ಮಕ್ಕಳಾಗತಾವ ತಗೋ ಈ ಉತ್ತತ್ತಿಗಳನ್ನು"[೧] ಎಂದು ಗಂಗಮ್ಮನಿಗೆ ಕೊಟ್ಟರು. ಜೋಡಿ ಉತ್ತತ್ತಿಗಳಲ್ಲಿ ಒಂದು ಕೆಟ್ಟಿತ್ತು ಅದನ್ನು ಕಂಡು ಶಿವಯೋಗಿಗಳು "ಏನವ್ವಾ ಹೀಂಗಾತಲ್ಲ"[೨] ಎಂದು ಮರುಗಿದರು. ಅದಕ್ಕೆ ಗಂಗಮ್ಮ ಆ ಉತ್ತತ್ತಿಗಳನ್ನು ತೆಗೆದುಕೊಂಡು "ನಮ್ಮ ನಸೀಬದಾಗ ಇದ್ದದ್ದು ಆಗತೈತಿ ಬಿಡ್ರಿ"[೩] ಎಂದು ಸುಮ್ಮನಾದಳು. ಆಗ ಶಿವಯೋಗಿಗಳು ಮತ್ತೆ ಹೀಗೆ ಹೇಳಿದರು "ಆದರೆ ಎರಡನೇದು ದೇಶಾ ಮೆರೀತೈತಿ"[೪] ಎಂದು ಇಬ್ಬರೂ ದಂಪತಿಗಳನ್ನು ಸಂತೈಸಿದರು. ಕೊನೆಗೆ ಇಬ್ಬರೂ ದಂಪತಿಗಳು ಒಬ್ಬರಿಗೊಬ್ಬರು ಸಮಾಧಾನವನ್ನು ಮಾಡುತ್ತ ಮನೆಗೆ ತೆರಳಿದರು. ನಂತರ ಕೊನೆಗೆ ಕಾಲ ಗತಿಸಿದಂತೆ ಗಂಗಮ್ಮನವರು ಗರ್ಭಿಣಿಯಾದರು. ಶಿವಯೋಗಿಗಳು ಕೊಟ್ಟ

---

೧. ಗ್ರಂಥ, ಕರ್ನಾಟಕದ ಹಿಂದೂಸ್ಥಾನಿ ಸಂಗೀತಗಾರರು, ಲೇ. ಶ್ರೀ. ಸದಾನಂದ ಕನವಳ್ಳಿ, ಪು. ಸಂ. ೧೪೩. ಪ್ರಕಾಶನ ೨೦೦೪.

೨. ಗ್ರಂಥ, ಕರ್ನಾಟಕದ ಹಿಂದೂಸ್ಥಾನಿ ಸಂಗೀತಗಾರರು, ಲೇ. ಶ್ರೀ. ಸದಾನಂದ ಕನವಳ್ಳಿ, ಪು. ಸಂ. ೧೪೩, ಪ್ರಕಾಶನ ೨೦೦೪.

೩. ಅದೇ.

೪. ಅದೇ.

ಉತ್ಪತ್ತಿಯಲ್ಲಿ ಒಂದು ಕೆಟ್ಟದ್ದರಿಂದ ಮೊದಲನೆಯ ಕೂಸಿಗೆ ಕಣ್ಣು, ಕಾಲು ಇರಲಿಲ್ಲ. ಈ ಮಗುವು ಮೂರು ತಿಂಗಳು ಬದುಕಿ ತೀರಿಕೊಂಡು ಹೋಯಿತು. ಅದಾದ ನಂತರ ದಿ ೨೨-೯-೧೯೨೮ ರಂದು ಒಂದು ದಿವ್ಯ ರತ್ನದಂತಹ ಪುತ್ರ ಸಂತಾನ ಜನನವಾಯಿತು. ಅವರೇ ಪಂಡಿತ ಬಸವರಾಜ ಬೆಂಡಿಗೇರಿಯವರು.

ಆದರೆ ಈ ಮಗುವಿಗೂ ಕೂಡಾ ಕಾಲುಗಳು ಅಶಕ್ತವಾಗಿದ್ದವಲ್ಲದೇ ದೃಷ್ಟಿಮಾಂದ್ಯವು ಕಂಡುಬಂದಿತು. ತಂದೆ ಶಂಕ್ರಪ್ಪ ಹಾಗೂ ತಾಯಿ ಗಂಗಮ್ಮ ಇವರಿಗೆ ಇದು ಒಂದು ದೊಡ್ಡ ಚಿಂತೆ ಆಯಿತು. ಹೀಗೆಯೇ ಮೂರು ತಿಂಗಳುಕಾಲ ಗತಿಸಿದ ನಂತರ ಕೂಸಿನೊಡನೆ ಗಂಗಮ್ಮನವರು ಬಾಗಿಲಲ್ಲಿ ಕುಳಿತಾಗ ಅದನ್ನು ನೋಡಿ ಹಾದಿಯಲ್ಲಿ ಹೋಗುವ ಒಬ್ಬ ಮಾನಸಿಕ ಸಾಧು ಹೀಗೆ ನುಡಿದನು."ಅಲೆಲೆ ಕೂಸ! ಇದು ಒಳ್ಳೆಯದಾಗತೈತಿ ಹೋಗು"[೧] ಎಂದು ನುಡಿದು ಹೋಗಿಬಿಟ್ಟನು. ಈ ಒಂದು ಮಾತನ್ನು ಕೇಳಿ ತಂದೆ ತಾಯಿಗಳು ಮನೆಯಲ್ಲಿ ಬಹಳ ಸಂತೋಷ ಹಾಗೂ ಸಮಾಧಾನ ಪಟ್ಟರು. ಬಸವರಾಜರಿಗೆ ಕಾಲ ಗತಿಸಿದಂತೆ ಅಥಣಿ ಶಿವಯೋಗಿಗಳ ಆಶೀರ್ವಾದದಿಂದ ಕಾಲುಗಳು ಸರಿಹೊಂದಿದವು, ಆದರೆ ದೃಷ್ಟಿಮಾಂದ್ಯದ ಕೊರತೆ ಇದ್ದರೂ ಸಹ ಇವರ ಬುದ್ಧಿಯು ಬಹಳ ಚುರುಕಾಗಿತ್ತು. ಹಾಗೂ ಇವರ ಕೈ ಬೆರಳುಗಳು ಗಂಟಿನಂತಿದ್ದು ತಬಲಾದ ಸಲುವಾಗಿಯೇ ಮಾಡಿಸಿದ ಹಾಗೆ ಇದ್ದವು. ಗೀತ, ವಾದ್ಯ, ನೃತ್ಯ ಇವುಗಳಿಗೆ ಭಗವಂತನ, ಮಹಾತ್ಮರ ಆಶೀರ್ವಾದವಿರಲೇಬೇಕು. ಆ ಒಂದು ಆಶೀರ್ವಾದ ಪಂಡಿತ ಬಸವರಾಜ ಬೆಂಡಿಗೇರಿಯವರಿಗೆ ಇದ್ದಿತು. ಆದ ಕಾರಣ ಅವರ ಹೆಸರು ರಾಷ್ಟ್ರದ ತುಂಬ ಹಬ್ಬಿತು. ಇಂತಹ ಒಂದು ದಿವ್ಯರತ್ನವು ಹುಟ್ಟುವದು ಬಹಳ ವಿರಳ. ಹೀಗೆ ಮುಂದೆ ಪಂಡಿತ ಬಸವರಾಜ ಬೆಂಡಿಗೇರಿಯವರು ತಪಸ್ವಿಗಳಾದ ಅಥಣಿ ಶಿವಯೋಗಿಗಳ ಹಾಗೂ ಅನೇಕ ಸತ್ಪುರುಷರ ಆಶೀರ್ವಾದದಿಂದ ದೇಶವೆಲ್ಲ ಮೆರೆದು ಎಲ್ಲಾ ದೊಡ್ಡ ಕಲಾವಿದರಿಂದ ಶಭಾಶ್ ಎನ್ನಿಸಿಕೊಂಡರು.

---

೧. ಗ್ರಂಥ, ಕರ್ನಾಟಕದ ಹಿಂದೂಸ್ಥಾನಿ ಸಂಗೀತಗಾರರು, ಲೇ. ಶ್ರೀ. ಸದಾನಂದ ಕನವಳ್ಳಿ, ಪು. ಸಂ. ೧೪೩, ಪ್ರಕಾಶನ ೨೦೦೪.

## ಅಧ್ಯಾಯ - ೫

# (ಅ) ಪಂಡಿತ ಬಸವರಾಜ ಬೆಂಡಿಗೇರಿಯವರ ತಬಲಾ ಶಿಕ್ಷಣ ಹಾಗೂ ಗುರು ಪರಂಪರೆ

# (ಬ) ತಬಲಾ ಪರಂಪರೆಯ ಕಲಾವಿದರಾಗಿ ಪಂಡಿತ ಬಸವರಾಜ ಬೆಂಡಿಗೇರಿ

ಅಧ್ಯಾಯ-೫

# ಪಂಡಿತ ಬಸವರಾಜ ಬೆಂಡಿಗೇರಿಯವರ ತಬಲಾ ಶಿಕ್ಷಣ ಹಾಗೂ ಗುರು ಪರಂಪರೆ

ಪಂಡಿತ ಬಸವರಾಜ ಬೆಂಡಿಗೇರಿಯವರಿಗೆ ಬಾಲ್ಯದಲ್ಲಿ ದೃಷ್ಟಿಮಾಂದ್ಯದ ಕಾರಣ ಬಸವರಾಜರ ತಂದೆ ಶಂಕ್ರಪ್ಪ ಹಾಗೂ ತಾಯಿ ಗಂಗವ್ವನವರಿಗೆ ಶಾಲೆಗೆ ಕಳಿಸಲು ತೊಂದರೆಯಾಗತೊಡಗಿತು. ಹೀಗೆ" ಶಾಲಾಭ್ಯಾಸದಿಂದ ವಂಚಿತನಾದ ಮಗ ಸಂಗೀತವನ್ನಾದರೂ ಕಲಿಯಲಿ ಎಂಬುದು ತಾಯಿಯ ಆಶೆ. ಆದರೆ ಮಗ ಕಲಿತು ವಿದ್ಯಾವಂತನಾಗಬೇಕೆಂಬುದು ತಂದೆಯ ಇಚ್ಛೆ."[೧] ಆದರೆ ಏನು ಮಾಡುವದು ಆಶೆಪಡೋದು ಒಂದು ಆಗೋದು ಒಂದು ಅಂದ ಹಾಗೆ ಕೊನೆಗೆ ಬಸವರಾಜರನ್ನು ತಬಲಾವನ್ನಾದರೂ ಕಲಿಯಲಿ ಎಂದು ತಂದೆಯವರು ತಮಗೆ ಮಾಹಿತಿಯಿದ್ದ ಕೆಲವು ತಬಲಾ ಠೇಕಾಗಳನ್ನು ತನ್ನ ಮಗನಾದ ಬಸವರಾಜನಿಗೆ ಹೇಳಲು ಪ್ರಾರಂಭಿಸಿದರು. ಬಸವರಾಜನು ಒಂಬತ್ತನೆಯ ವಯಸ್ಸಿನಿಂದಲೇ ತಬಲಾ ಕಲಿಯಲು ಪ್ರಾರಂಭಿಸಿದ. ತಂದೆಯವರು ಹೇಳಿಕೊಟ್ಟ ಠೇಕಾಗಳನ್ನು ಸತತ ಪರಿಶ್ರಮ, ಸಾಧನೆ , ಮತ್ತು ಶ್ರದ್ಧಾ ಭಕ್ತಿಗಳಿಂದ ಕಲಿತು ಕೀರ್ತನೆ, ಭಜನೆ, ಸುಗಮ ಸಂಗೀತಗಳಿಗೆ ತಬಲಾ ಸಾಥ ಮಾಡತೊಡಗಿದರು. ಬಸವರಾಜರಿಗೆ ತಮ್ಮ ತಂದೆಯವರು ಏನೇ ಹೇಳಿಕೊಡಲಿ ಅದನ್ನು ಜ್ಞಾಪಕದಲ್ಲಿಟ್ಟುಕೊಂಡು ಯಾವಾಗ ಬೇಕಾದರು ತಂದೆಯವರು ಅಪ್ಪಿ ತಪ್ಪಿ ಕೇಳಿದರೆ ಅದನ್ನು ದಢಾರನೇ ತಬಲಾದಲ್ಲಿ ನುಡಿಸಿ ತೋರಿಸಿಬಿಡುತ್ತಿದ್ದರು. ಇಂತಹ ಒಂದು ಚತುರ ಬುದ್ಧಿಯನ್ನು ಬಸವರಾಜರು ಹೊಂದಿದ್ದರು. ಒಮ್ಮೆ ಹೀಗೆಯೇ ಇರುವಾಗ ೧೯೩೮ ರಲ್ಲಿ ಒಬ್ಬ ಸುಪ್ರಸಿದ್ಧ ಕೀರ್ತನಕಾರರಾದ ಪಂಡಿತ ಹರಿಸರ್ವೋತ್ತಮಾಚಾರ್ಯ್ರ ಕೀರ್ತನ ಕಾರ್ಯಕ್ರಮ ಬೆಳಗಾಂವಿಗೆ ನಿಗದಿತವಾಗಿತ್ತು. ಆಗ ಆ ಕೀರ್ತನ ಕಾರ್ಯಕ್ರಮಕ್ಕೆ ತಂದೆ ಶಂಕ್ರಪ್ಪ ಹಾಗೂ ಬಸವರಾಜರು ಹೋಗುವ ಒಂದು ಸುಸಂಧಿ ಒದಗಿತು. ಅಲ್ಲಿ ಹರಿಸರ್ವೋತ್ತಮಾಚಾರ್ಯರು ಬಾಲಕ ಬಸವರಾಜನ ತಬಲಾ ನುಡಿಸುವ ವಿಶೇಷ ಶೈಲಿಯನ್ನು ಪರಿಗ್ರಹಿಸಿ ಬಹಳ ಸಂತೋಷದಿಂದ ಪುಲಕಿತರಾದರು. ಬಾಲಕನ ಈ ಸಾಧನೆಯ ಬಗ್ಗೆ ಮೆಚ್ಚುಗೆ ಹೊಂದಿದ ಕೀರ್ತನಕಾರರಿಗೆ ಈ ಬಾಲಕನು ಒಬ್ಬ ಮಹಾನ್ ತಬಲಾ ಪಂಡಿತನಾಗುವಲ್ಲಿ ಸಂಶಯವಿಲ್ಲವೆಂದೆನಿಸಿತು. ಪಂಡಿತರು ಬಾಲಕನ ತಂದೆಗೆ ಹೇಳಿದರು"ಈ ಬಾಲಕನ ತಬಲಾ ನುಡಿಸಿದ ಶೈಲಿಯು ಬಹಳ ಉತ್ತಮವಾಗಿದ್ದು ಇವನನ್ನು ದೊಡ್ಡ ತಬಲಾ ಪಂಡಿತರಲ್ಲಿ ಹೆಚ್ಚಿನ ಅಭ್ಯಾಸಕ್ಕಾಗಿ ಕಳಿಸಿ ಕೊಡ್ರಿ" ಎಂದು ಸಲಹೆ ಮಾಡಿದರು. ಹೀಗೆಯೇ ಮುಂದೆ ಒಂದು ಸಲ ನಾಗನೂರು ರುದ್ರಾಕ್ಷಿ ಮಠಕ್ಕೆ ಗಾನಯೋಗಿ

---

೧. ಹಿಂದೂಸ್ತಾನಿ ಸಂಗೀತಗಾರರು, ಲೇ. ಸಿದ್ಧರಾಮಯ್ಯ ಮಠಪತಿ, ಪು.ಸಂ.೧೨೧ ಪ್ರಕಾಶನ ೧೯೯೭.

ಪಂಚಾಕ್ಷರಿ ಗವಾಯಿಗಳು ಬಂದಿದ್ದರು. ಅಲ್ಲಿ ಶಂಕ್ರಪ್ಪನವರು ಮಗನನ್ನು ಕರೆದುಕೊಂಡು ಹೋಗಿ ಪಂಚಾಕ್ಷರಿ ಗವಾಯಿಗಳಿಗೆ "ಮಗಾ ತಬಲಾ ಬಾರಿಸ್ತಾನ, ಆಶೀರ್ವದಿಸಬೇಕು"[೧] ಎಂದು ಬೇಡಿಕೊಂಡರು. ಪಂಡಿತ ಪಂಚಾಕ್ಷರಿ ಗವಾಯಿಗಳವರು ತಪಸ್ವಿಗಳು ಖ್ಯಾಲ, ಠುಮ್ರಿ ಹಾಡುವದಲ್ಲದೇ ಸಂಗೀತವಾದ್ಯಗಳನ್ನು ನುಡಿಸುವದರಲ್ಲಿ ಪಾಂಡಿತ್ಯವುಳ್ಳವರಾಗಿದ್ದರು. ಅವರು ಬಸವರಾಜರಿಗೆ "ಮಗು, ಬಾರಿಸು ಕೇಳೋಣ"[೨] ಅಂದರು. ಲಂಡ ಚೊಣ್ಣ, ಟೊಪ್ಪಿಗೆ ಹಾಕಿಕೊಂಡು ಬಂದ ಬಾಲಕ ಬಸವರಾಜ ಅಂದವಾಗಿ ತಬಲಾ ನುಡಿಸಿದ್ದನ್ನು ಕೇಳಿ ಪಂಚಾಕ್ಷರಿ ಗವಾಯಿಗಳು "ಕೈ ಛಲೋ ಅವ. ಒಳ್ಳೆಯ ಗುರುಗಳಲ್ಲಿ ಶಿಕ್ಷಣ ಕೊಡಿಸು ಒಳ್ಳೆಕಲಾವಿದ ಆಗತಾನ"[೩] ಎಂದು ಆಶೀರ್ವಾದ ಮಾಡಿದರು. ಹೀಗೆ ಇಬ್ಬರು ಹಿರಿಯ ಪಂಡಿತರಿಂದ ಆಶೀರ್ವಾದ ಪಡೆದದ್ದು ಬಾಲಕ ಬಸವರಾಜನ ಸುದೈವ ಎಂಬಂತೆ ಸುಪ್ರಸಿದ್ಧ ತಬಲಾವಾದಕರಾದ ಉಸ್ತಾದ ಮೆಹಬೂಬ ಖಾನ ಸಾಹೇಬ ಮಿರಜಕರ ಆಗ ಬೆಳಗಾಂವಿಯಲ್ಲಿಯೇ ಇದ್ದರು. ಉಸ್ತಾದ ಮೆಹಬೂಬ ಖಾನ ಸಾಹೇಬ ಮಿರಜಕರ ಅವರು ಅನೇಕ ಉಸ್ತಾದರಲ್ಲಿ ಕಲಿತು ತಬಲಾದಲ್ಲಿ ಪಳಗಿದವರಾಗಿದ್ದರು ಹಾಗೂ ತಬಲಾದ ಎಲ್ಲಾ ಘರಾಣೆಗಳ ಚೆನ್ನಾದ ಪರಿಚಯು ಅವರಿಗಿತ್ತು. ಒಂದೇ ಮಾತಿನಲ್ಲಿ ಹೇಳಬೇಕೆಂದರೆ ತಬಲಾ ವಿದ್ಯೆಯಲ್ಲಿ ಸಾಗರದ ಹಾಗೆ ಇದ್ದರು. ೧೯೩೮ ರಲ್ಲಿ ೧೦ ವರ್ಷದವರಾಗಿದ್ದ ಬಸವರಾಜರಿಗೆ ತಂದೆ ಶಂಕ್ರಪ್ಪನವರು ಉಸ್ತಾದ ಮೆಹಬೂಬ ಖಾನ ಸಾಹೇಬ ಮಿರಜಕರ ಅವರಲ್ಲಿ ಕರೆದುಕೊಂಡು ಹೋಗಿ ನನ್ನ ಮಗನಾದ ಈ ಬಾಲಕನಿಗೆ ನನಗೆ ತಿಳಿದ ಕೆಲವು ತಬಲಾ ಠೇಕಾಗಳನ್ನು ಹೇಳಿಕೊಟ್ಟಿದ್ದೇನೆ, ಹೆಚ್ಚಿನ ಶಿಕ್ಷಣವನ್ನು ತಮ್ಮಂತಹ ಮೇಧಾವಿಗಳಲ್ಲಿ ಪಡೆಯುವ ಸೌಭಾಗ್ಯ ದೊರೆಯುವದೆಂಬ ಆಶೆಯಿಂದ ತಮ್ಮಲ್ಲಿ ಕರೆದುಕೊಂಡು ಬಂದಿದ್ದೇನೆ ಇವನನ್ನು ತಮ್ಮ ಶಿಷ್ಯನನ್ನಾಗಿ ಮಾಡಿಕೊಂಡು ತಬಲಾ ಕಲಾವಿದನನ್ನಾಗಿ ಮಾಡಬೇಕೆಂದು ನನ್ನ ಕಳಕಳಿಯ ಪ್ರಾರ್ಥನೆ ಎಂದು ಬೇಡಿಕೊಂಡರು. ಆಗ ಮೆಹಬೂಬ ಖಾನ ಸಾಹೇಬರು ಒಂದೇ ಮಾತಿಗೆ ಒಪ್ಪಿಕೊಂಡು ಬಸವರಾಜರನ್ನು ಶಿಷ್ಯರನ್ನಾಗಿ ಮಾಡಿಕೊಂಡರು. ಹೀಗೆ ತಬಲಾ ಶಿಕ್ಷಣದ ಒಂದು ಉತ್ತಮ ಪ್ರಾರಂಭವಾಯಿತು.

ಉಸ್ತಾದ ಮೆಹಬೂಬಖಾನ ಸಾಹೇಬ ಮಿರಜಕರ ಅವರು ಬಹಳ ಸರಳ ಸ್ವಭಾವದ ವ್ಯಕ್ತಿಯಾಗಿದ್ದರು ಇವರು ಬಸವರಾಜರಿಗೆ ನಸುಕಿನಲ್ಲಿ ನಾಲ್ಕು ಘಂಟೆಯಲ್ಲಿಯೇ ಎಬ್ಬಿಸಿ ಪಾಠ ಆರಂಭಿಸುತ್ತಿದ್ದರು. ಐದು ಗಂಟೆಗೆ ಖಾನ ಸಾಹೇಬರು ನಮಾಜ ಮಾಡಲು ಹೋಗುತ್ತಿದ್ದರು. ಹೋಗುವಾಗ ಬಸವರಾಜರಿಗೆ ಈ ಬೋಲನ್ನು ಅಭ್ಯಾಸ ಮಾಡು ಎಂದು ಹೇಳುತ್ತಿದ್ದರು. ನಮಾಜ

---

೧. ಕರ್ನಾಟಕ ಹಿಂದೂಸ್ಥಾನಿ ಸಂಗೀತಗಾರರು, ಲೇ. ಸದಾನಂದ ಕನವಳ್ಳಿ, ಪು.ಸಂ. ೧೪೩ ಪ್ರಕಾಶನ ೨೦೦೪.
೨. ಕರ್ನಾಟಕ ಹಿಂದೂಸ್ಥಾನಿ ಸಂಗೀತಗಾರರು, ಲೇ. ಸದಾನಂದ ಕನವಳ್ಳಿ, ಪು.ಸಂ. ೧೪೪ ಪ್ರಕಾಶನ ೨೦೦೪.
೩. ಅದೇ.

ಮಾಡಿ ಹಿಂತಿರುಗಿ ಬಂದ ಮೇಲೆ "ಬ್ಯಾರೆ ಏನಾರ ಬಾರಸ್ಯಾನ ಏನ."[೧] ಎಂದು ಖಾನಸಾಹೇಬರು ತಮ್ಮ ಹೆಂಡತಿಯನ್ನು ವಿಚಾರಿಸುತ್ತಿದ್ದರು. ಎಂಟು ಗಂಟೆಗೆ ಚಹಾ ಕೊಟ್ಟು ಮತ್ತೆ ಪಾಠ ಆರಂಭ. ಬಸವರಾಜ ಏಕಪಾಠಿ ಒಮ್ಮೆ ಹೇಳಿದ್ದು ಗಟ್ಟಿ ಮತ್ತೊಮ್ಮೆ ಹೇಳಬೇಕಾಗಿರಲಿಲ್ಲ. ಅದು ಯಾವುದೇ ಕಾಯದಾ ಇರಲಿ, ರೇಲಾ ಇರಲಿ, ಗತ್ತು ಇರಲಿ, ಬಸವರಾಜರು ಮೊದಲು ಆ ತಬಲಾ ಬೋಲುಗಳನ್ನು ಬಾಯಲ್ಲಿ ಅಂದು ಗಟ್ಟಿ ಮಾಡಿಕೊಂಡು ಕೊನೆಗೆ ತಬಲಾದ ಮೇಲೆ ಬೋಲುಗಳನ್ನು ನುಡಿಸುತ್ತಿದ್ದರು. ಬಸವರಾಜರು ಗುರುಗಳು ಹೇಳಿದ್ದ ಬೋಲುಗಳನ್ನು ಯಾವುದೇ ಪುಸ್ತಕಗಳಲ್ಲಿ ಬರೆಯುತ್ತಿರಲಿಲ್ಲ ಎಲ್ಲವನ್ನೂ ತಮ್ಮ ಜ್ಞಾಪಕದಲ್ಲಿ ಇಟ್ಟುಕೊಳ್ಳುತ್ತಿದ್ದರು. ಅದೊಂದು ದೈವದತ್ತವಾದ ಜ್ಞಾಪಕಶಕ್ತಿ ಅವರಿಗಿತ್ತು. ಈ ಎಲ್ಲಾ ಬಸವರಾಜರ ಗಮನಾರ್ಹ ಅಂಶಗಳನ್ನು ತಿಳಿದ ಮೆಹಬೂಬಖಾನ ಸಾಹೇಬ ಮಿರಜಕರ ಅವರು ಶಿಷ್ಯನಾದ ಬಸವರಾಜರನ್ನು ಬಹಳ ಪ್ರೀತಿಯಿಂದ ಕಾಣುತ್ತಿದ್ದರು. ಶಿಷ್ಯ ಗಾಳಿ ಪಟದಪ್ಪು ಹಗುರು. ಹೀಗಾಗಿ ಮೆಹಬೂಬಖಾನ ಸಾಹೇಬ ಮಿರಜಕರ ಅವರು ತಮ್ಮ ಶಿಷ್ಯನಾದ ಬಸವರಾಜನನ್ನು ತಮ್ಮ ಹೆಗಲ ಮೇಲೆ ಕುಳ್ಳಿರಿಸಿಕೊಂಡು ಬೆಳಗಾಂವಿಯಲ್ಲಿ ತಿರುಗಾಡುತ್ತಿದ್ದರು.

"೧೯೩೪ ರಲ್ಲಿ ಮೆಹಬೂಬ ಖಾನರು ಕೊಲ್ಹಾಪುರಕ್ಕೆ ಹೋಗಿ ನೆಲೆಸಿದರು."[೨] ಆದರೆ ಬಸವರಾಜರಿಗೆ ಬಡತನದಿಂದಾಗಿ ಗುರುಗಳಲ್ಲಿಗೆ ಕೊಲ್ಹಾಪುರಕ್ಕೆ ಹೋಗಲು ಆಗಲಿಲ್ಲ. ಬಸವರಾಜರಿಗೆ ತಬಲಾ ಪಾಠ ನಿಂತು ಹೋಯಿತು. ಆದರೆ ಅವರು ಗುರುಗಳಿಲ್ಲವೆಂದು ತಮ್ಮ ವೇಳೆಯನ್ನು ಹಾಳು ಮಾಡದೆ "ಕಾಗಲಕರ ಬುವಾರಿಂದ ಗಾಯನ ಕಲಿತ ಹಾಗೆಯೇ, ಪ್ರಸಿದ್ಧ ಹಾರ್ಮೋನಿಯಮ್ ವಾದಕರಾದ ವಿಠ್ಠಲರಾವ ಕೋರೆಗಾಂವಕರವರಿಗೆ ತಬಲಾ ಸಾಥ ಮಾಡುತ್ತ ಸಾಥ-ಸಂಗತ ಕಲಿತರು"[೩] ಗಾಯನ ಕಲಿತ ಪರಿಣಾಮವಾಗಿ ಸಂಗೀತಕ್ಕೆ ಹಾಗೂ ವಾದ್ಯ ಸಂಗೀತಕ್ಕೆ ಯಾವ ರೀತಿ ಸಾಥ ಮಾಡಬೇಕು ಎಂಬ ಒಂದು ಅನುಭವ ಅವರಿಗೆ ಆಯಿತು. ಬಸವರಾಜರಿಗೆ ತಬಲಾ ನುಡಿಸುವವರಿಗೆ ಸಂಗೀತದ ಪರಿಚಯ ವಿರಬೇಕು ಹಾಗೂ ಸಂಗೀತಗಾರರಿಗೆ ತಬಲಾದ ಪರಿಚಯವಿರಬೇಕು ಎಂಬುದು ಗುರುಗಳ ಮುಖಾಂತರ ತಿಳಿದಿತ್ತು. ಗುರುಗಳಾದ ಮೆಹಬೂಬ ಖಾನ ಸಾಹೇಬರು ಕೊಲ್ಹಾಪುರಕ್ಕೆ ಹೋದ ಸ್ವಲ್ಪ ದಿನಗಳ ನಂತರ ಶಿಷ್ಯನನ್ನು ನೆನಸಿಕೊಂಡು ಬೆಳಗಾಂವಿಗೆ ಬಂದು ಬಿಡುತ್ತಿದ್ದರು. ಶಿಷ್ಯನನ್ನು "ಬಸವಣ್ಣ,ಬಸವಣ್ಣ" ಎಂದು ಪ್ರೀತಿಯಿಂದ ಕರೆಯುತ್ತಿದ್ದರು. ಗುರುಗಳಾದ ಮೆಹಬೂಬ ಖಾನರಿಗೆ ಶಿಷ್ಯನನ್ನು ಬಿಟ್ಟು ಇರಲು ಆಗುತ್ತಿರಲಿಲ್ಲ ಹೀಗಾಗಿ ತಮ್ಮ ಮನೆಯಲ್ಲಿಯೇ ಇಟ್ಟುಕೊಂಡು ತಬಲಾ ವಿದ್ಯಾದಾನ ಮುಂದುವರೆಸಿದರು.

---

೧. ಗ್ರಂಥ "ಕರ್ನಾಟಕ ಹಿಂದೂಸ್ಥಾನಿ ಸಂಗೀತಗಾರರು" ಲೇ. ಸದಾನಂದ ಕನವಳ್ಳಿ, ಪು.ಸಂ. ೧೪೪ ಪ್ರಕಾಶನ ೨೦೦೪.

೨. ಅದೇ.

೩. ಅದೇ.

ಉಸ್ತಾದ ಮೆಹಬೂಬ ಖಾನ ಸಾಹೇಬ ಮಿರಜಕರ ಆವರು ತಮ್ಮ ಶಿಷ್ಯನಾದ ಬಸವರಾಜನ ಜಾಣತನವನ್ನು ನೋಡಿ ಅವರಿಗೆ ಕೆಲವೊಂದು ಹಳೆಯ ವಿಶೇಷವಾದ ಹಾಗೂ ವಿವಿಧ ಘರಾಣೆಗಳ ಪೇಶಕಾರ, ಕಾಯದಾ,ರೇಲಾ,ಗತ್ತು, ಪರನ್, ಉಠಾನ್, ದ್ವಿಪಲ್ಲಿ, ತ್ರಿಪಲ್ಲಿ, ಚೌಪಲ್ಲಿ, ಪಂಚಪಲ್ಲಿ, ಫರಮಾಯಿಶ್‌ಚಕ್ರದಾರ, ಮುಂತಾದವುಗಳನ್ನು ಬಸವರಾಜರಿಗೆ ಹೇಳಿ ಕೊಟ್ಟರು. ಇದೇ ರೀತಿ ಗಾಯನದವರ ಜೊತೆಗೆ ಅಂದರೆ ಕಿರಾಣಾ ಘರಾಣೆಯವರ ಜೊತೆಗೆ ಸ್ವಚ್ಛ ಠೇಕಾವನ್ನು ನುಡಿಸುವದು, ಗ್ವಾಲ್ಹೇರ್, ಜೈಪುರ ಘರಾಣೆಯ ಗಾಯಕರೊಡನೆ ಲಡತ ಮಾಡುವದು .ಲಡತ ಅಂದರೆ ಗಾಯನದವರು ಲಯಕಾರಿ ಮಾಡುವಾಗ ಯಾವ ಲಯದಲ್ಲಿ ಇರುತ್ತಾರೋ ಅದೇ ಲಯದಲ್ಲಿ ತಬಲಾ ಬೋಲುಗಳನ್ನು ಹೊಂದಿಸಿ ಬಾರಿಸುವದು ಮತ್ತು ತಬಲಾ ವಾದಕನು ಯಾವುದೇ ಠೇಕಾವನ್ನು ನುಡಿಸುವಾಗ ಎಷ್ಟು ತಬಲಾದ ಮಾತ್ರಾಗಳು ಆಗಿವೆ ಎನ್ನುವ ಒಂದು ಲೆಕ್ಕ ತಬಲಾವಾದಕನಿಗೆ ಇರುವದು ಅತೀ ಅವಶ್ಯವಾಗಿದೆ. ತಬಲಾ ವಾದಕರಿಗೆ ಲಯ ಹಾಗೂ ಗಣಿತ ಸರಿ ಇರಬೇಕು ಎಂದು ಮೆಹಬೂಬ ಖಾನ ಸಾಹೇಬರು ಬಸವರಾಜರಿಗೆ ಹೇಳುತ್ತಿದ್ದರು. ಇದೇ ರೀತಿ ವಾದ್ಯ ಸಂಗೀತದ ಜೊತೆಗೆ ತಬಲಾ ಸಾಥ ಯಾವ ರೀತಿ ಮಾಡಬೇಕು ಎಂಬುದನ್ನು ಸಹ ಹೇಳಿ ಕೊಡುತ್ತಿದ್ದರು. ಅಂದರೆ ವಾದ್ಯ ಸಂಗೀತಗಾರರು ಮೊದಲು ತಮ್ಮ ಆಲಾಪವನ್ನು ಮಾಡಿ ಅಥವಾ ತಮ್ಮ ಜೋಡ ಝಾಲವನ್ನು ನುಡಿಸಿ ಸಮ್ ಕೊಟ್ಟ ಮೇಲೆ ಮೊದಲು ತಬಲಾವಾದಕರು ಪೇಶಕಾರವನ್ನು ನುಡಿಸಿದ ನಂತರ ಒಂದು ವಿಶಿಷ್ಟವಾದ ತಿಹಾಯಿಂದ ಸಮ್ಮಿಗೆ ಬರಬೇಕು ನಂತರ ವಾದ್ಯ ಸಂಗೀತಗಾರರು ತಮ್ಮ ವಿದ್ವತ್ತಿನಂತೆ ಲಯಕಾರಿಗಳನ್ನು ಮಾಡುತ್ತಾರೆ. ಅದನ್ನು ತಬಲಾವಾದಕನು ತಿಳಿದು ವಾದ್ಯ ಸಂಗೀತಗಾರರು ಮಾಡಿದಂತಹ ಲಯಕಾರಿಗಳನ್ನು ಮಾಡಿ ತೋರಿಸಬೇಕು. ವಾದ್ಯ ಸಂಗೀತದಲ್ಲಿಯೂ ಕೂಡಾ ಜೋರದಾರಿಯಾದ ವಾದ್ಯಗಳು ಇರುವವು. ಉದಾ:- ಸರೋದ, ಮೋಹನ ವೀಣಾ, ಶಹನಾಯಿ, ಕ್ಲ್ಯಾರಿಯೋನೇಟ ಮುಂತಾದವುಗಳು ಈ ವಾದ್ಯಗಳ ಜೊತೆಗೆ ಜೋರದಾರಿಯಾದ ತಬಲಾ ಬೋಲುಗಳ ಪ್ರಯೋಗವು ಇರಬೇಕು ಮತ್ತು ಕಾರ್ಯಕ್ರಮ ನಡೆಯುವಾಗ ತಬಲಾದ ಶೃತಿಯು ಹೆಚ್ಚು, ಕಮ್ಮಿ ಯಾದರೆ ಹಾಡುವವರಿಗೆ ಆಗಲಿ, ವಾದ್ಯ ಸಂಗೀತಗಾರರಿಗೇ ಆಗಲಿ ಅವರ ಕಾರ್ಯಕ್ರಮಕ್ಕೆ ರಸಭಂಗ ಉಂಟಾಗದಂತೆ ತಬಲಾ ನುಡಿಸುತ್ತಲೇ ನಿಧಾನವಾಗಿ ತಬಲಾವನ್ನು ಶೃತಿ ಮಾಡಿಕೊಳ್ಳಬೇಕು ಇಷ್ಟೇ ಅಲ್ಲ ಯಾರದೇ ಕಾರ್ಯಕ್ರಮವಾಗಿರಲಿ ಸಂಗೀತಗಾರನ ಅಥವಾ ವಾದಕನ ಕಾರ್ಯಕ್ರಮದಲ್ಲಿ ಕುಳಿತಿರುವಾಗ ಅವರ ತಂಬೂರಿಗಳು ಸರಿಯಾಗಿ ಶೃತಿಯಾಗಿವೆಯೋ ಇಲ್ಲವೋ ಎಂಬುದನ್ನು ತಿಳಿದುಕೊಳ್ಳುವುದು ಅತೀ ಅವಶ್ಯವಾಗಿದೆ. ಈ ರೀತಿ ಮೆಹಬೂಬ ಖಾನ ಸಾಹೇಬ ಮಿರಜಕರ ಅವರು ಗಾಯನ, ಸಂಗೀತ ವಾದನಗಳಲ್ಲದೆ, ನೃತ್ಯದ ಜೊತೆಗೆ ಹೇಗೆ ತಬಲಾವನ್ನು ನುಡಿಸಬೇಕೆಂಬುದರ ಬಗ್ಗೆ ಬಸವರಾಜರಿಗೆ ಸವಿಸ್ತಾರವಾಗಿ ಹೇಳಿ ಕೊಡುತ್ತಿದ್ದರು.

ಪಂಡಿತ ಬಸವರಾಜ ಬೆಂಡಿಗೇರಿಯವರಿಗೆ ಎಲ್ಲಾ ನೃತ್ಯದ ತಬಲಾ ಬೋಲುಗಳ ಪರಿಚಯವಿತ್ತು. ತಬಲಾ ಶಿಕ್ಷಣದಲ್ಲಿ ಬಸವರಾಜ ಬೆಂಡಿಗೇರಿಯವರು ಗುರು ಉಸ್ತಾದ ಮೆಹಬೂಬ ಖಾನ ಮಿರಜಕರ ಅವರ ಶಿಷ್ಯತ್ವ ವಹಿಸಿ ತಬಲಾ ಕಲಿಯುವದರಲ್ಲಿ ಪ್ರಾವೀಣ್ಯತೆಯನ್ನು ಗಳಿಸಿ ಮೆಹಬೂಬ ಖಾನ ಅವರ ಹೆಸರನ್ನು ಉಚ್ಚ ಸ್ಥಾನಕ್ಕೆ ಮುಟ್ಟಿಸಿದರು. ತಾವು ಒಬ್ಬ ಶ್ರೇಷ್ಠ ತಬಲಾ ವಾದಕರೆನ್ನಿಸಿಕೊಂಡರಲ್ಲದೆ ಬಸವರಾಜರು ತಮ್ಮ ವಿದ್ಯೆಯನ್ನು ಅಸಂಖ್ಯ ಶಿಷ್ಯರಲ್ಲಿ ಹಂಚಿದರು. ಇವರ ಮಾರ್ಗದರ್ಶನದಿಂದ ಪಳಗಿದ ತಬಲಾ ಕಲಾವಿದ ಶಿಷ್ಯವೃಂದದಲ್ಲಿ ಮುಖ್ಯರಾದವರೆಂದರೆ ಪಂ. ರಘುನಾಥನಾಕೋಡ, ಡಾ. ರಾಚಯ್ಯ ಹಿರೇಮಠ, ಶ್ರೀ. ಶ್ರೀಶೈ ಲ ಬಳ್ಳೂರ, ಶ್ರೀ ನಿಸಾರ ಅಹಮದ, ಶ್ರೀ ಫಯಾಜ ಖಾನ, ಶ್ರೀ ಶಶಿಭೂಷಣ ಗುರ್ಜರ, ಶ್ರೀ ಸಂತೋಷ ಕುಲಕರ್ಣಿ ಮುಂತಾದವರಾಗಿದ್ದಾರೆ.

ಮೂಲತಃ ತಬಲಾ ವಾದ್ಯ ಸಂಶೋಧಕರು ಹಾಗೂ ತಬಲಾ ವಾದನ ಪ್ರವೀಣರಾದ ಉಸ್ತಾದ ಸಿದ್ಧಾರ ಖಾನ ಡಾಡಿ ಅವರಿಂದ ತಬಲಾ ವಾದನ ಕಲೆಯ ಪರಂಪರೆಯು ಪ್ರಾರಂಭವಾಗಿ ನಂತರ ಸಿದ್ಧಾರ ಖಾನ ಡಾಡಿಯವರ ಕಿರಿಯ ಸೋದರ ಉ. ಚಾಂದಖಾನರವರ ತಬಲಾ ಪರಂಪರೆಯು ಪ್ರಾರಂಭವಾಯಿತು. ಉ. ಚಾಂದ ಖಾನರವರ ಇಬ್ಬರ ಪುತ್ರರಾದ ಉ. ಲಿಲ್ಲಿ ಮಸೀತ ಖಾನ ಹಾಗೂ ಲಂಗಡೇ ಹುಸೇನ ಖಾನ ಈ ಪುತ್ರರಿಂದ ಶಿಷ್ಯವೃಂದ ವೃದ್ಧಿಗೊಂಡು, ಅವರಲ್ಲೊಬ್ಬರಾದ ಉಸ್ತಾದ ಮೆಹಬೂಬ ಖಾನ ಮಿರಜಕರ ಇವರೇ ಪಂಡಿತ ಬಸವರಾಜ ಬೆಂಡಿಗೇರಿಯವರ ಗುರುಗಳು. ಈ ಗುರು-ಶಿಷ್ಯ ಪರಂಪರೆಯ ವಿಸ್ತಾರವಾದ ಮಾಹಿತಿ ಈ ಮುಂದಿನ ಪುಟದಲ್ಲಿ ವಿವರಿಸಲಾಗಿದೆ.

# ಗುರು - ಶಿಷ್ಯ ಪರಂಪರೆ

- ಉಸ್ತಾದ್ ಅಲ್ಲಾದಿಯಾಖಾನ್ ಹೈದರಾಬಾದ್
- ಉಸ್ತಾದ್ ಅಹಮದ್‌ಜಾನ್ ತಿರಖ್ವಾ
- ಉಸ್ತಾದ್ ನನ್ನೆ ಖಾನ (ದಿಲ್ಲಿ)
- ಪಂಡಿತ್ ಶಂಕರಭಯ್ಯಾ (ಪಖವಾಜ್)
- **ಉಸ್ತಾದ್ ಜುಗನಾಖಾನ್ (ಪೂರಬ್ ಬಾಜ್)**
- ಉಸ್ತಾದ್ ಜಹಾಂಗೀರ್ ಖಾನ್
- ಉಸ್ತಾದ್ ಅಲ್ಲಾದಿಯಾಖಾನ್ ಅಮರಾವತಿವಾಲೇ
- ಪಂಡಿತ್ ಬಲವಂತರಾವ್ ವಾಟ್ವೆ (ಪಖವಾಜ್)

↓

**ಉಸ್ತಾದ್ ಮೆಹಬೂಬಖಾನ್ ಸಾಹೇಬ್ ಅಮೀನ್ ಸಾಹೇಬ್ ಮೀರಜ್‌ಕರ್**

- ಉಸ್ತಾದ್‌ಶೇಖ್ ದಾವೂದ ಖಾನ್ ಹೈದರಾಬಾದ
- ಕಲಂದರ್ ಕೊಲ್ಲಾಪುರ
- ಅಬ್ಬಾಸ್ ಕೊಟೇಕರ
- **ಪಂಡಿತ ಬಸವರಾಜ ಬೆಂಡಿಗೇರಿ**
- ಮಮ್ಮುಲಾಲ್ ಸಂಗಾಂವಕರ್
- ನಾರಾಯಣರಾವ ಚಿಕ್ಕೋಡಿ

↓

- ಡಾ॥ ರಾಚಯ್ಯ ಹಿರೇಮಠ
- **ಪಂಡಿತ ರಘುನಾಥ ನಾಕೋಡ ಧಾರವಾಡ**
- ಶ್ರೀಶೈಲ ಬಳ್ಳೂರ

↓

- ವಿಶ್ವನಾಥ ನಾಕೋಡ
- ಶ್ರೀಧರ ಮಾಂಡ್ರೆ
- ಚಂದ್ರು ಬಡಿಗೇರ್
- ರವಿ ಕೂಡ್ಲಿಗಿ
- ನಾರಾಯಣ್ ಪುರಾಣಿಕ್
- ಅಲ್ಲಮಪ್ರಭು ಕಡಕೋಳ
- ಶಾಂತಲಿಂಗ ದೇಸಾಯಿ ಕಲ್ಲೂರ
- **ರವಿಕಿರಣ ನಾಕೋಡ**
- ವಿಠ್ಠಲ ಅವಧಾನಿ
- ಅನಂತ ಜಗತಿ
- ಷಡಾಕ್ಷರಿ ಶೀಲವಂತರ
- ರಾಘವೇಂದ್ರ ನಾಕೋಡ
- ಗುರುರಾಜ ಆಚಾರ್ಯ
- ನಾಗರಾಜ ದಂಡಾಪುರ
- ರಾಜೇಂದ್ರ ನಾಕೋಡ
- ದತ್ತಾತ್ರಯ ಕಬಾಡಿ

## ಬ) ತಬಲಾ ಪರಂಪರೆಯ ಕಲಾವಿದರಾಗಿ ಪಂಡಿತ ಬಸವರಾಜ ಬೆಂಡಿಗೇರಿ:

ಹಿಂದೂಸ್ತಾನಿ ಸಂಗೀತ ಕ್ಷೇತ್ರದಲ್ಲಿ ಅತೀ ಮುಖ್ಯವಾದಂತಹ ಚರ್ಮವಾದ್ಯ ತಬಲಾ ಅಂದರೆ ಅತಿಶಯೋಕ್ತಿಯಾಗಲಿಕ್ಕಿಲ್ಲ. ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತ ಪರಂಪರೆಯಲ್ಲಿ ತಬಲಾ ಉತ್ಪತ್ತಿಯಾದಾಗಿನಿಂದ ಹಿಡಿದು ಇಂದಿನವರೆಗೆ ತಬಲಾ ವಾದ್ಯದ ಕೊಡುಗೆ ಅತೀ ಉತ್ಕೃಷ್ಟವಾದಂತಹದ್ದು. ಅಂತಹ ತಬಲಾ ವಾದ್ಯವನ್ನು ಕಲಿಯಲು ಹಾಗೂ ತಬಲಾ ಕಲಾವಿದನಾಗಿ ರೂಪಗೊಳ್ಳಲು ಸಹಜವಾಗಿಯೇ ಎಲ್ಲಾ ಸಂಗೀತ ಪ್ರೇಮಿಗಳು ಇಚ್ಛಿಸುವದುಂಟು. ಅದೇ ರೀತಿ ಪಂಡಿತ ಬಸವರಾಜ ಬೆಂಡಿಗೇರಿಯವರು ಕೂಡ ಒಬ್ಬರು. ಇವರ "ತಂದೆ ಶಂಕರಪ್ಪರಿಗೆ ಸಂಗೀತದ ಹುಚ್ಚು. ತಬಲಾ ನುಡಿಸುತ್ತಿದ್ದರು. ಅವರೆ ಬಸವರಾಜರ ಮೊದಲ ಗುರು."[೧] ತಂದೆ ಶಂಕರಪ್ಪನವರು ಬಸವರಾಜರ ತಬಲಾ ಕಲಿಯುವ ಆಸೆಯನ್ನು ಗುರುತಿಸಿ ತಾವು ಕಲಿತ ಕೆಲವು ಠೇಕಾಗಳನ್ನು ಮಗನಿಗೆ ಕಲಿಸ ಹತ್ತಿದರು. ಬಸವರಾಜರು ತಂದೆ ಹೇಳಿಕೊಟ್ಟ ಠೇಕಾಗಳನ್ನು ಶ್ರದ್ಧಾ, ಭಕ್ತಿಯಿಂದ ಕಲಿತು ನುಡಿಸಲಾರಂಭಿಸಿದರು. ಹೀಗಾಗಿ ಶಂಕರಪ್ಪನವರಿಗೆ ಮಗನ ಭವಿಷ್ಯ ತಬಲಾದಲ್ಲಿ ಒಳ್ಳೆಯದಿದೆ, ಒಳ್ಳೆಯ ಕಲಾಕಾರನಾಗುತ್ತಾನೆ ಎಂಬ ವಿಶ್ವಾಸ. ಅವರು ಆತನಿಗೆ ಹೆಚ್ಚಿನ ತಬಲಾ ಅಭ್ಯಾಸ ಮಾಡಿಸಬೇಕೆಂಬ ಇಚ್ಛೆಯಿಂದ ಉತ್ತಮ ಗುರುಗಳನ್ನು ಹುಡುಕಿಕೊಂಡು ಹೊರಟರು ಸಕಾಲದಲ್ಲಿ ಶ್ರೀ ಶಂಕರಪ್ಪನವರಿಗೆ ಬೆಳಗಾವಿಯ ನಾಗನೂರ ರುದ್ರಾಕ್ಷಿ ಮಠಕ್ಕೆ ಆಗಮಿಸಿದ್ದ ಗಾನಯೋಗಿ ಪಂಚಾಕ್ಷರಿಗವಾಯಿಗಳವರ ದರ್ಶನವಾಗಿ ಅವರಲ್ಲಿ ಶಂಕರಪ್ಪನವರು ಮಗನಿಗೆ ತಬಲಾ ಕಲುಸುವ ತಮ್ಮ ಆಸೆಯನ್ನು ವ್ಯಕ್ತಪಡಿಸಿದಾಗ ಸಂಗೀತ ಸಾಧಕರು, ಸಂಗೀತ ಕ್ಷೇತ್ರಕ್ಕೆ ತಮ್ಮದೇ ಆದ ಕೊಡುಗೆಯನ್ನು ನೀಡಿ ಕರ್ನಾಟಕದಾದ್ಯಂತ ಸಂಗೀತದ ಕಂಪನ್ನು ಪಸರಿಸುವಲ್ಲಿ ಹಾಗೂ ಇಂದಿನ ಗಾನಯೋಗಿ ಭೂಮಿಯ ಮೇಲೆ ತಿರುಗಾಡುವ ದೇವರೆಂದೆನಿಸಿದ ಡಾ. ಪುಟ್ಟರಾಜ ಕವಿ ಗವಾಯಿಗಳವರ ಶಿಷ್ಯರು ಹಾಗೂ ಹಲವಾರು ರಾಷ್ಟ್ರೀಯ, ಅಂತರಾಷ್ಟ್ರೀಯ ಮಟ್ಟದಲ್ಲಿ ಹೆಸರಾಂತ ಅನೇಕ ಕಲಾವಿದರನ್ನು ರೂಪಗೊಳಿಸುವಲ್ಲಿ ಕಾರಣೀಭೂತರಾದಂತಹ ಗಾನಯೋಗಿ, ಮಹಾನ್‌ಶಿವಯೋಗಿ ಪಂಡಿತ ಪಂಚಾಕ್ಷರಿ ಗವಾಯಿಗಳವರ ಆಶೀರ್ವಾದದ ಹಾಗೂ ಸಲಹೆಯ ಮೇರೆಗೆ ಮತ್ತು ೧೯೩೮ ರಲ್ಲಿ ಬೇಟಿಯಾದಂತಹ ಖ್ಯಾತ ಕೀರ್ತನಕಾರರಾದ ಪಂಡಿತ ಹರಿಸರ್ವೋತ್ತಮಚಾರ್ಯ ಮುಂಡರಗಿಯವರ ಸಲಹೆಯ ಮೇರೆಗೆ ಬಸವರಾಜರನ್ನು ತಂದೆಯವರಾದ ಶ್ರೀ ಶಂಕ್ರಪ್ಪನವರು ಉಸ್ತಾದ ಮೆಹಬೂಬ ಖಾನ ಸಾಹೇಬ ಮಿರಜಕರ ಇವರ ಹತ್ತಿರ ಹೋಗಿ ತಮ್ಮ ಮಗನಿಗೆ ತಬಲಾ ಕಲಿಸಬೇಕು ಎಂದು ಕೇಳಿಕೊಂಡಾಗ ಖಾನ ಸಾಹೇಬರು ತಬಲಾ ಕಲಿಸಲು ಸಂತೋಷದಿಂದ ಒಪ್ಪಿಕೊಂಡರು. "ಸುದೈವಕ್ಕೆ ಶ್ರೇಷ್ಠ ತಬಲಾ ಕಲಾವಿದ

---

೧. ಗ್ರಂಥ "ಕರ್ನಾಟಕ ಹಿಂದೂಸ್ಥಾನಿ ಸಂಗೀತಗಾರರು," ಲೇ. ಸದಾನಂದ ಕನವಳ್ಳಿ, ಪು.ಸಂ. ೧೪೩ ಪ್ರಕಾಶನ ೨೦೦೪.

ಉಸ್ತಾದ ಮೆಹಬೂಬ ಖಾನ ಮಿರಜಕರ ಬೆಳಗಾಂವಿಯಲ್ಲಿಯೇ ಇದ್ದರು. ೧೯೩೮ ರಲ್ಲಿ ೧೦ ವರ್ಷದ ಬಸವರಾಜ ಉಸ್ತಾದ ಮೆಹಬೂಬ ಖಾನರ ಶಿಷ್ಯನಾದ."[೧] ಶಿಷ್ಯನಿಗೆ ಒಳ್ಳೆಯ ಗುರು, ಗುರುವಿಗೆ ಒಳ್ಳೆಯ ಶಿಷ್ಯ ದೊರೆತಂತಾಯಿತು. ಉಸ್ತಾದ ಮೆಹಬೂಬ ಖಾನ ಸಾಹೇಬರ ಹೆಸರು ದೊಡ್ಡ ದೊಡ್ಡ ತಬಲಾ ವಾದಕರುಗಳ ಸಾಲಿನಲ್ಲಿಯೇ ಬರುತ್ತದೆ. ಅಂತಹ ಮಹಾನ್ ತಬಲಾ ಕಲಾವಿದರು ಉಸ್ತಾದ ಮೆಹಬೂಬ ಖಾನ ಸಾಹೇಬರು ಆಗಿದ್ದರು. ಇವರು ಉಸ್ತಾದ ಅಲ್ಲಾದಿಯಾಖಾನ (ಹೈದರಾಬಾದ), ಉಸ್ತಾದ ಅಹಮದ ಜಾನ ತಿರಖವಾ, ಉಸ್ತಾದ ನನ್ನೆಖಾನ (ದಿಲ್ಲಿ), ಉಸ್ತಾದ ಜಹಾಂಗೀರ ಖಾನ, ಉಸ್ತಾದ ಅಲ್ಲಾದಿಯಾ ಖಾನ ಅಮರಾವತಿ, ಉಸ್ತಾದ ಜುಗನಾ ಖಾನ(ಪೂರಬ) ಇಂತಹ ಮಹಾನ ಮಹಾನ ತಬಲಾ ವಿದ್ವಾಂಸರಲ್ಲಿ ತಬಲಾ ಕಲಿತು ದಿಲ್ಲಿ, ಅಜರಡಾ, ಪೂರಬ(ಲಖನೌ), ಘರಾಣೆಗಳನ್ನು ಸಂಪೂರ್ಣವಾಗಿ ಅಭ್ಯಾಸ ಮಾಡಿ ಈ ಘರಾಣೆಗಳ ವಾದನ ಶೈಲಿಯ ಮೇಲೆ ಹಿಡಿತ ಸಾಧಿಸಿದ್ದರು. ಉಸ್ತಾದ ಮೆಹಬೂಬ ಖಾನ ಸಾಹೇಬರು ತಬಲಾದ ಜೊತೆಗೆ ಪಖವಾಜ ನುಡಿಸುವದನ್ನು ಪಂಡಿತ ಬಲವಂತರಾವ ವಾಟ್ವೆ ಮತ್ತು ಪಂಡಿತ ಶಂಕರ ಭಯ್ಯಾ ಇವರಲ್ಲಿ ಕಲಿತರು. ಪಖವಾಜ ಹಾಗೂ ತಬಲಾ ಘರಾಣೆಗಳೆರಡರ ವಿದ್ಯೆಯಲ್ಲೂ ಸಾಗರದಂತಿದ್ದ ಉಸ್ತಾದ ಮೆಹಬೂಬ ಖಾನ ಸಾಹೇಬ ಮಿರಜಕರ ಇವರ ಹತ್ತಿರ ತಬಲಾ ಅಭ್ಯಾಸ ಪ್ರಾರಂಬ ಮಾಡಿದ್ದು ಬಸವರಾಜರ ಸುದೈವ ವಾಗಿತ್ತು. ಬಸವರಾಜರು ಸಹಿತ ಗುರುವಿಗೆ ತಕ್ಕ ಶಿಷ್ಯರಾಗಿ ಗುರುಗಳು ಹೇಳಿಕೊಟ್ಟ ಪಾಠವನ್ನು ತುಂಬಾ ಶ್ರದ್ಧಾ ಭಕ್ತಿಯಿಂದ ಕಲಿಯಲು ಪ್ರಾರಂಬಿಸಿದರಲ್ಲದೆ, ಗುರುಗಳು ಹೇಳಿಕೊಟ್ಟ ಪಾಠವನ್ನು ತಕ್ಷಣ ಒಪ್ಪಿಸುವಂತಹ ಸಾಧಕರು ಬಸವರಾಜರಾಗಿದ್ದರು. "ಹೀಗೆ ಅವರು ಗುರುಗಳ ಹತ್ತಿರ ಆರೇಳು ವರ್ಷ ಅಭ್ಯಾಸ ಕಲಿತು, ಸತತ ಪರಿಶ್ರಮ ಪಟ್ಟರು."[೨] ಗುರುಗಳ ಹಾಗೆಯೇ ತಾವು ಬೆಳೆಯಬೇಕೆಂಬ ಮಹತ್ವಾಕಾಂಕ್ಷೆಯನ್ನು ಹೊಂದಿ ತಾವು ಸಹಿತ ಒಂದೊಂದೆ ಘರಾಣೆಗಳನ್ನು ಆಳವಾಗಿ ಅಭ್ಯಸಿಸಿ ಆಯಾ ಘರಾಣೆಗಳ ವಾದನ ಶೈಲಿಯ ಮೇಲೆ ಹಿಡಿತವನ್ನು ಸಾಧಿಸುತ್ತಾ ಎಲ್ಲಾ ಘರಾಣೆಗಳ ಪರಿಚಯವನ್ನು ಮಾಡಿಕೊಂಡರು . ಅದರಲ್ಲಿಯೂ ದಿಲ್ಲಿ, ಅಜರಡಾ, ಪೂರಬ, ಘರಾಣೆಗಳ ಬಗ್ಗೆ ಹೆಚ್ಚಿನ ಅಭ್ಯಾಸಮಾಡಿ ಆ ಘರಾಣೆಗಳ ನುರಿತ ತಬಲಾ ವಾದಕರೆನಿಸಿಕೊಂಡರು. ದಿಲ್ಲಿ ಘರಾಣೆಯ ಗುರು-ಶಿಷ್ಯ ಪರಂಪರೆಯ ಸಾಲಿನಲ್ಲಿ ತಮ್ಮ ಹೆಸರನ್ನು ಸಹಿತ ನಮೂದಿಸುವಂತೆ ಮಾಡಿದ ಘನತೆ, ಗೌರವ, ಪಂಡಿತ ಬಸವರಾಜ ಬೆಂಡಿಗೇರಿಯವರದು. ಇದನ್ನು ಪ್ರಾ. ರಾಜೀವ ಪುರಂದರೆಯವರು ತಮ್ಮ ಪುಸ್ತಕದಲ್ಲಿ ಈ ರೀತಿಯಾಗಿ ಸ್ಪಷ್ಟೀಕರಿಸಿದ್ದಾರೆ.

---

೧. ಕರ್ನಾಟಕ ಹಿಂದೂಸ್ತಾನಿ ಸಂಗೀತಗಾರರು, ಲೇ. ಸದಾನಂದ ಕನವಳ್ಳಿ, ಪು.ಸಂ. ೧೪೪ ಪ್ರಕಾಶನ ೨೦೦೪.
೨. ಹಿಂದೂಸ್ಥಾನಿ ಸಂಗೀತಗಾರರು, ಲೇ. ಸಿದ್ಧರಾಮಯ್ಯ ಮಠಪತಿ, ಪು.ಸಂ. ೧೨೨, ಪ್ರಕಾಶನ ೧೯೯೭.

### ಉ. ಸಿದ್ಧಾರ ಖಾನರ ಕಿರಿಯ ಸೋದರ ಉ. ಚಾಂದ ಖಾನರ ಪರಂಪರೆ

ಉ. ಚಾಂದ ಖಾನ್

- ಪುತ್ರ — ಉ. ಲಿಲ್ಲಿ ಮಸೀತ್ ಖಾನ್
- ಪುತ್ರ — ಲಂಗಡೇ ಹುಸೇನ ಖಾನ್
  - ಪುತ್ರ — ಉ. ಫಸೀಟ ಖಾನ್
  - ಪುತ್ರ — ಉ. ನನ್ಹೆ ಖಾನ್
    - ಶಿಷ್ಯ — ಉ. ಜುಗನಾ ಖಾನ್
      - ಶಿಷ್ಯ — ಉ. ಮೆಹಬೂಬ ಖಾನ್ ಮಿರಜಕರ
        - ಶಿಷ್ಯ — ಪಂ. ಬಸವರಾಜ ಬೆಂಡಿಗೇರಿ
        - ಶಿಷ್ಯ — ಪಂ. ನಾರಾಯಣರಾವ ಚಿಕ್ಕೋಡಿ
        - ಶಿಷ್ಯ — ಉ. ಮಮ್ಮೂಲಾಲ ಸಂಗಾವಕರ
        - ಶಿಷ್ಯ — ಶ್ರೀ. ಗೋಡಬೋಲೆ
        - ಶಿಷ್ಯ — ಉ. ಶೇಖ ದಾವೂದ ಖಾನ್

ಹೀಗೆ ಬಸವರಾಜ ಬೆಂಡಿಗೇರಿಯವರು ನಿಧಾನವಾಗಿ ತಬಲಾ ಕ್ಷೇತ್ರದಲ್ಲಿ ಉತ್ತಮ ಕಲಾವಿದರಾಗಿ ಬೆಳೆಯಲು ಪ್ರಾರಂಭಿಸಿದರು. ಖ್ಯಾತ ಹಿಂದೂಸ್ತಾನಿ ಸಂಗೀತ ಕಲಾವಿದರ ಜೊತೆಗೆ ತಬಲಾ ಸಾಥ ಮಾಡಿ ಖ್ಯಾತಿ ಸಂಪಾದಿಸಿಕೊಂಡರು. ಇದಲ್ಲದೇ ತಬಲಾ ಸೋಲೊ ಕಾರ್ಯಕ್ರಮಗಳನ್ನು ನೀಡಿ ಸ್ವಚ್ಛವಾದ ಘರಾಣೆಯ ಬೋಲುಗಳನ್ನು ನುಡಿಸಿ ಪ್ರೇಕ್ಷಕರ ಮೆಚ್ಚುಗೆ ಮತ್ತು ಮಹಾನ ಕಲಾ ಚೇತನರಿಂದ ಸೈ ಎನ್ನಿಸಿಕೊಂಡವರು ಪಂಡಿತ ಬಸವರಾಜ ಬೆಂಡಿಗೇರಿಯವರು. ಹಿರಿಯರ ಆಶೀರ್ವಾದ ಹಾಗೂ ತಮ್ಮ ಕಠಿಣ ಪರಿಶ್ರಮದಿಂದ ಅಬ್ಯಾಸ ಮಾಡಿ ಸಂಗೀತ ಕ್ಷೇತ್ರಕ್ಕೆ ತಬಲಾ ಪರಂಪರೆಯಲ್ಲಿ ತಮ್ಮದೇ ಆದಂತಹ ಕೊಡುಗೆಯನ್ನು ನೀಡಿ, ತಬಲಾ ಪರಂಪರೆಯಲ್ಲಿ ತಬಲಾ ಕಲಾವಿದರೆಂದು ತಮ್ಮನ್ನು ತಾವು ಪರಿಚಯಿಸಿಕೊಳ್ಳುವಲ್ಲಿ ಯಶಸ್ವಿಯಾದವರು ಪಂಡಿತ ಬಸವರಾಜ ಬೆಂಡಿಗೇರಿಯವರು.

## ಅಧ್ಯಾಯ - ೬

# ಪಂಡಿತ ಬಸವರಾಜ ಬೆಂಡಿಗೇರಿಯವರ ಪ್ರಮುಖ ಕಾರ್ಯಕ್ರಮಗಳ ವಿವರ

ಅಧ್ಯಾಯ - ೬

# ಪಂಡಿತ ಬಸವರಾಜ ಬೆಂಡಿಗೇರಿಯವರ ಪ್ರಮುಖ ಕಾರ್ಯಕ್ರಮಗಳ ವಿವರ

## (ಅ) ವೇದಿಕೆಯ ಸಾಥ-ಸಂಗತ ಕಾರ್ಯಕ್ರಮಗಳು :

ಪಂಡಿತ ಬಸವರಾಜ ಬೆಂಡಿಗೇರಿಯವರು ನೋಡಲಿಕ್ಕೆ ಅಷ್ಟು ದಷ್ಟ-ಪುಷ್ಟರಾಗಿರದಿದ್ದರೂ ಅವರಲ್ಲಿ ಕಲಾಪ್ರಾವೀಣ್ಯತೆ ಮಹತ್ವದ್ದಾಗಿತ್ತು. ಕೆಲವೊಂದು ಬಾರಿ ಸಂಗೀತಗಾರರು ಇವರ ಸಣ್ಣ ಮೈಕಟ್ಟು ನೋಡಿ ಇವರನ್ನು ತಬಲಾ ಪ್ರವೀಣರೆಂದು ನಂಬುತ್ತಲೇ ಇರಲಿಲ್ಲ. ''೧೯೫೫ ಮೇ ತಿಂಗಳು ಪುಣೆಯಲ್ಲಿ ಅಬ್ದುಲ್ ಹಲೀಮ ಜಾಫರ ಖಾನರ ಸಿತಾರವಾದನ ಕಚೇರಿ.''[೧] ಪಂಡಿತ ರವಿಶಂಕರರ-ಸಮಾನ ಸಿತಾರವಾದನದಲ್ಲಿ ಹೆಸರು ವಾಸಿಯಾದ ಉಸ್ತಾದ ಹಲೀಮ ಜಾಫರ ಖಾನರು ಅಲ್ಲಿ ತಬಲಾ ಸಾಥಿದಾರರು ಯಾರು ಎಂದು ಅಲ್ಲಿಯ ವ್ಯವಸ್ಥಾಪಕರನ್ನು ಕೇಳಿದರಂತೆ. ವ್ಯವಸ್ಥಾಪಕರು ಬೆಂಡಿಗೇರಿಯವರನ್ನು ತೋರಿಸಿದರು. ಆಗ ಬಸವರಾಜರ ಸಾದಾ ವ್ಯಕ್ತಿತ್ವವನ್ನು ನೋಡಿ ಜಾಫರ ಖಾನರು ನಗೆ ಯಾಡುತ್ತಾ ''ಆಪ್ ತಬಲಾ ಬಜಾತೆ ಹೈ?''[೨] ಎಂದು ಬಸವರಾಜ ಬೆಂಡಿಗೇರಿಯವರನ್ನು ಪ್ರಶ್ನಿಸಿದರು. ಬೆಂಡಿಗೇರಿಯವರೂ ಕೂಡ ಸ್ವಲ್ಪ ಸ್ವಲ್ಪ ಬಾರಿಸಲು ಬರುತ್ತದೆ ಎಂದರು. ಇಬ್ಬರೂ ಕಲಾವಿದರು ಸಭೆಯಲ್ಲಿ ಸಿದ್ಧರಾಗಿ ಕುಳಿತರು. ಮೊದಲು ಹಲೀಮ ಜಾಫರ ಖಾನರು ರಾಗದ ಆಲಾಪವನ್ನು ಪ್ರಾರಂಭಿಸಿದರು. ಅದರಲ್ಲಿಯೇ ಸ್ವಲ್ಪ ಹೊತ್ತು ಹೋಯಿತು. ಮೇ ತಿಂಗಳ ಬೆಸಿಗೆಯಾದದ್ದರಿಂದ ಬಸವರಾಜ ಬೆಂಡಿಗೇರಿಯವರು ಸೆಕೆಯನ್ನು ತಾಳಲಾರದೇ ಕುಳಿತಿದ್ದರು. ಹಲೀಮ ಝಾಫರ ಖಾನರು ಜೋಡ ಝಾಲಾವನ್ನು ನುಡಿಸಲು ಪ್ರಾರಂಭಿಸಿದಾಗ ಬೆಂಡಿಗೇರಿಯವರು ಜುಬ್ಬಾ ತೆಗೆದು ಬನಿಯನ್, ಪಯಜಾಮಾ ಮೇಲೆ ಕುಳಿತರು. ಇದನ್ನು ನೋಡಿ ಜನರು ತಮಾಶೆ ಮಾಡಹತ್ತಿದ್ದರು. ಕಣ್ಣು ಮುಚ್ಚಿ ಆಲಾಪ ಮಾಡುತ್ತಿದ್ದ ಜಾಫರ ಖಾನರು ಕಣ್ಣು ತೆರೆದು ನೋಡಿದಾಗ ಬನಿಯನ್, ಪಯಜಾಮಾ ಮೇಲೆ ಕುಳಿತ ಬಸವರಾಜರನ್ನು ನೋಡಿ ಆಶ್ಚರ್ಯ ದಿಂದ ನಗತೊಡಗಿದರು. ಆಗ ಜಾಫರ ಖಾನರು ತಮ್ಮ ಆಲಾಪ ಜೋಡ ಝಾಲಾಕ್ಕೆ ವಿರಾಮ ಕೊಟ್ಟು ಈ ವೊಂದು ಪರಿಸ್ಥಿತಿಯನ್ನು ತಿಳಿದು ಬಸವರಾಜರಿಗೆ ಸಿತಾರಿನ ಸಮ್ಮನ್ನು ಕೊಟ್ಟರು. ಸಂಗೀತ ಕಾರ್ಯಕ್ರಮ ವಿನೋದದ ಜೊತೆಗೆ ಸ್ವಾರಸ್ಯಮಯವಾಗಿ ಸಾಗಿತು. ಜಾಫರ ಖಾನರು

---

೧. ಕರ್ನಾಟಕದ ಹಿಂದೂಸ್ತಾನಿ ಸಂಗೀತಗಾರರು, ಲೇಖಕರು-ಸದಾನಂದ ಕನವಳ್ಳಿ, ಪು. ಸಂ. ೧೪೬, ಪ್ರಕಾಶನ ೨೦೦೪.

೨. ಕರ್ನಾಟಕದ ಹಿಂದೂಸ್ತಾನಿ ಸಂಗೀತಗಾರರು, ಲೇಖಕರು-ಸದಾನಂದ ಕನವಳ್ಳಿ, ಪು. ಸಂ. ೧೪೬, ಪ್ರಕಾಶನ ೨೦೦೪.

ಸಿತಾರಿನಲ್ಲಿ ಯಾವ ಲಯಕಾರಿಯನ್ನು ಮಾಡುತ್ತಾರೋ ಅದೇ ಲಯಕಾರಿಗಳನ್ನು ಬಸವರಾಜರು ತಬಲಾದಲ್ಲಿ ನುಡಿಸಿ, ಜಾಫರ ಖಾನರ ಮನಸ್ಸನ್ನು ಗೆದ್ದುಕೊಂಡರು. ಬಸವರಾಜರ ಕೈಚಳಕವನ್ನು ನೋಡಿ ಆನಂದಿಸಿದ ಶ್ರೋತೃವೃಂದವು ಚಪ್ಪಾಳೆಯ ಜೊತೆಗೆ ತಮ್ಮ ಹರ್ಷವನ್ನು ವ್ಯಕ್ತಗೊಳಿಸಿದರು. ಈ ಘಟನೆಯಿಂದ ಪಂಡಿತ ಬಸವರಾಜ ಬೆಂಡಿಗೇರಿಯವರು ಅತ್ಯಂತ ನಿರ್ಮಲವಾದ ಮನಸ್ಸನ್ನು ಹೊಂದಿದವರು, ಅತ್ಯಂತ ಸರಳ ಸ್ವಭಾವದ ವ್ಯಕ್ತಿ ಆಗಿದ್ದರು ಎಂದು ಎಲ್ಲ ಶ್ರೋತೃವೃಂದಕ್ಕೆ ಮನದಟ್ಟಾಯಿತು. 

"೧೯೭೪ ಧಾರವಾಡದಲ್ಲಿ ಸಿತಾರರತ್ನ ರಹಿಮತ್ ಖಾನರ ೨೫ ನೇಯ ಪುಣ್ಯತಿಥಿ ಸಂಗೀತೋತ್ಸವ ಮೂರು ರಾತ್ರಿ ಸಂಗೀತ ಸಮಾರಾಧನೆ. ಅಖಿಲ ಭಾರತ ಮಟ್ಟದ ಸಂಗೀತಗಾರರು ಪಾಲ್ಗೊಂಡಿದ್ದರು."[೧] ಉಸ್ತಾದ ಅಮೀರ ಖಾನರ ಶಿಷ್ಯೆ ಶ್ರೀಮತಿ ಕಂಕಣಾ ಬ್ಯಾನರ್ಜಿ ಮತ್ತು ಪ್ರತಾಪ ನಾರಾಯಣ ಸಹ ಬಂದಿದ್ದರು. ಇವರಿಬ್ಬರ ಜುಗಲಬಂದಿಯ ಕಾರ್ಯಕ್ರಮವನ್ನು ಸಿತಾರ ರತ್ನ ರಹಿಮತ ಖಾನರ ಸಂಗೀತೋತ್ಸವದಲ್ಲಿ ಏರ್ಪಡಿಸಲಾಗಿತ್ತು. ಕಾರ್ಯಕ್ರಮ ಪ್ರಾರಂಭವಾಗುವ ಮುನ್ನ ಕಂಕಣಾ ಬ್ಯಾನರ್ಜಿ ಮತ್ತು ಪ್ರತಾಪ ನಾರಾಯಣ ತಾವು ಇಳಿದುಕೊಂಡ ಸ್ಥಳದಲ್ಲಿ ತಬಲಜಿಯವರನ್ನು ಕರೆಸಲು ಹೇಳಿದರು. ಈ ತಬಲಜಿಯವರೆ ಪಂಡಿತ ಬಸವರಾಜ ಬೆಂಡಿಗೇರಿಯವರು. ಇವರ ಕಣ್ಣು ಸರಿಯಾಗಿ ಕಾಣಿಸುತ್ತಿದ್ದಿಲ್ಲ. ಆದ ಕಾರಣ ಶಿಷ್ಯರು, ಕೈ ಹಿಡಿದುಕೊಂಡು ಬಂದರು. ಇವರ ಉಡುಗೆ ತೊಡುಗೆ ಅಷ್ಟೊಂದು ಹೇಳಿಕೊಳ್ಳುವ ರೀತಿಯಲ್ಲಿರಲಿಲ್ಲ. ಸಾದಾ "ಡೊಗಳೆ ಪೈಜಾಮ, ಗಿಡ್ಡ ನೆಹರು ಶರ್ಟ್, ಹೇಳಿ ಮಾಡಿಸಿದ ಕಡ್ಡಿ ಪೈಲ್ವಾನ್ ' ಇವರೇನು ತಬಲಾ ಬಾರಿಸಿಯಾರು"[೨] ಎನ್ನುವಂತೆ ಇತ್ತು. ಈ ಸಮಯದಲ್ಲಿ ಕಂಕಣಾ ಬ್ಯಾನರ್ಜಿಯವರ ಖಾಸಾ ಶೈಲಿಯ ಗಾಯನದಲ್ಲಿ ಬೇಕಾಗುವ ನಿಧಾನ ಗತಿಯ ಅಥವಾ ವಿಲಂಬಿತ ಗತಿಯ ಝುಮ್ರಾ ತಾಲದ ಲಯ ತೋರಿಸಿ ಕೊಡಲು ತಬಲಾದ ಕಡೆಗೆ ಕೈ ಚಾಚಿದರು. ಆಗ ಬೆಂಡಿಗೇರಿಯವರು ಅವರಿಗೆ " ಹಾಂ, ತಬಲಾಕ್ಕೆ ಕೈ ಹಚ್ಚಬೇಡಿರಿ ಯಾವ ತಾಲಬೇಕೊ ಹೇಳಿರಿ. ನಾನು ಎಂಥೆಂಥವರೊಂದಿಗೆ ತಬಲಾ ಸಾಥ ನೀಡಿದವ"[೩] ಎಂದರು. ಬಸವರಾಜ ಬೆಂಡಿಗೇರಿಯವರ ಈ ರೀತಿಯ ಸ್ವಾಭಿಮಾನ ನೋಡಿ ಗಾಯಕರು ಅಚ್ಚರಿಗೊಂಡರು. ರಿಹರ್ಸಲ್

---

೧. ಗ್ರಂಥ "ಕರ್ನಾಟಕದ ಹಿಂದೂಸ್ತಾನಿ ಸಂಗೀತಗಾರರು", ಲೇಖಕರು-ಸದಾನಂದ ಕನವಳ್ಳಿ, ಪು. ಸಂ. ೧೪೧, ಪ್ರಕಾಶನ ೨೦೦೪.

೨. ಗ್ರಂಥ "ಕರ್ನಾಟಕದ ಹಿಂದೂಸ್ತಾನಿ ಸಂಗೀತಗಾರರು," ಲೇಖಕರು-ಸದಾನಂದ ಕನವಳ್ಳಿ, ಪು. ಸಂ. ೧೪೧, ಪ್ರಕಾಶನ ೨೦೦೪.

೩. ಗ್ರಂಥ "ಕರ್ನಾಟಕದ ಹಿಂದೂಸ್ತಾನಿ ಸಂಗೀತಗಾರರು," ಲೇಖಕರು-ಸದಾನಂದ ಕನವಳ್ಳಿ, ಪು. ಸಂ. ೧೪೧,೧೪೩. ಪ್ರಕಾಶನ ೨೦೦೪.

ಮಾಡಿ ಮುಗಿಸಿದ ಮೇಲೆ ಬಸವರಾಜರ ತಬಲಾವಾದನ ಶೈಲಿಯನ್ನು ನೋಡಿ ಇನ್ನೂ ಆಚ್ಚರಿಗೊಂಡರು. ಬಸವರಾಜ ಬೆಂಡಿಗೇರಿಯವರು ಯಾವ ಗಾಯಕರ ಜೊತೆ ಸಾಥ ನೀಡುತ್ತಿದ್ದಾರೋ ಅವರು ಎತ್ತುವ ಮೊದಲಿನ ನಾಲ್ಕು ಮಾತ್ರಾಗಳ ಲಯದ ಗತಿಯನ್ನು ಗುರುತಿಸಿಕೊಂಡು ಗಾಯಕರಿಗೆ ಪೂರಕವಾಗುವಂತೆಯೇ ಕೊನೆಯವರೆಗೆ ಕಾರ್ಯಕ್ರಮ ಯಸಸ್ವಿಗೊಳಿಸುವಲ್ಲಿ ಪೂರ್ಣ ಸಹಯೋಗ ನೀಡುತ್ತಿದ್ದರು. ಹೀಗಾಗಿ ಗಾಯಕರ ಮೆಚ್ಚುಗೆಗೆ ಪಾತ್ರರಾಗುತ್ತಿದ್ದರು. ಈ ದಿಶೆಯಲ್ಲಿ ಕಂಕಣಾ ಬ್ಯಾನರ್ಜಿಯವರು ಆಡಿದ ಮಾತು ಹೀಗಿದೆ '' ವಯಸ್ಸಾಗಿ ನಡೆಯುವಾಗ ಬೆಂಡಿಗೇರಿಯವರು ಝೋಲಿ ಹೊಡೆಯುತ್ತಿದ್ದರೂ ಲಯದಲ್ಲಿ ಮಾತ್ರ ಸ್ವಲ್ಪವೂ ಝೋಲಿ ಹೊಡೆಯುವದಿಲ್ಲ'' ವೆಂದು ಪ್ರಶಂಸೆ ಮಾಡಿದರು.

''೧೯೪೫ ರಲ್ಲಿ ಬಸವರಾಜ ಬೆಂಡಿಗೇರಿ ಅವರ ಸಂಗೀತಯಾತ್ರೆಗೆ ಮಹತ್ವದ ತಿರುವು ಒದಗಿತು. ಅವರು ಬಿ. ಆರ್.ದೇವಧರ ಮುಂಬೈಯಲ್ಲಿ ನಡೆಸುತ್ತಿದ್ದ ಸ್ಕೂಲ್ ಆಫ್‌ಇಂಡಿಯನ್ ಮ್ಯೂಸಿಕ್‌ಗೆ ಇಲ್ಲಿ ತಬಲಾ ಶಿಕ್ಷಕರಾಗಿ ಸೇರಿದರು.''[೧] ಅಲ್ಲಿ ಅವರಿಗೆ ತಬಲಾ ಶಿಕ್ಷಣ ನೀಡುವದರ ಜೊತೆಗೆ ಅಲ್ಲಿ ಬಂದ ಶ್ರೇಷ್ಠ ಸಂಗೀತಗಾರರಿಗೆ ಸಾಥ ನೀಡುವ ಸಂಧರ್ಭಗಳು ಬಹುವಾಗಿ ಲಭಿಸಿದವು. ಅಲ್ಲಿ ಬರುತ್ತಿದ್ದ ದೊಡ್ಡ ದೊಡ್ಡ ಗಾಯಕರಾಗಲಿ, ವಾದ್ಯ ಸಂಗೀತಗಾರರಾಗಲಿ ತಬಲಾ ನುಡಿಸುವವರಾಗಲಿ ಬಂದಾಗ '' ಮತ್ತೇನಾದರು ನಾ ತಿಳಿದುಕೊಳ್ಳಬೇಕೇನು'' ಎಂದು ಏನೊ ಸಂಕೋಚ ಮಾಡಿಕೊಳ್ಳಲಾರದೇ ಕೇಳಿಕೊಂಡು ಮತ್ತೆ ತಮ್ಮ ವಿದ್ಯೆಯನ್ನು ಇವರು ಬೆಳೆಸಿಕೊಳ್ಳುತ್ತಿದ್ದರು. ಬಸವರಾಜರಿಗೆ ಸಂಗೀತ ವಿದ್ಯೆ ಎಷ್ಟು ಕಲಿತರೂ ಕಡಿಮೆಯೇ ಎಂಬ ಭಾವನೆ. ಆಗಿನ ಕಾಲದಲ್ಲಿ ಮುಂಬೈಯಲ್ಲಿ ಸಾಕಷ್ಟು ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತದ ಕಾರ್ಯಕ್ರಮಗಳು ನಡೆಯುತ್ತಿದ್ದವು. ಆದ ಕಾರಣ ಪಂಡಿತ ಬಸವರಾಜ ಬೆಂಡಿಗೇರಿಯವರಿಗೆ ಮಹಾನ ಕಲಾಕಾರರ ಜೊತೆಗೆ ತಬಲಾ ಸಾಥ ನೀಡುವ ವಿಪುಲ ಅವಕಾಶಗಳು ದೊರೆತವು. ಅಂತಹ ಮಹಾನ ಸಂಗೀತ ಕಲಾಕಾರರ ಹೆಸರುಗಳು ಹೀಗಿವೆ. '' ಓಂಕಾರನಾಥ ಠಾಕೂರ, ಕೇಸರಬಾಯಿ ಕೇರಕರ, ಮೋಘುಬಾಯಿ ಕುರ್ಡಿಕರ, ಬಾಲಗಂಧರ್ವ, ಹೀರಾಬಾಯಿ ಬಡೋದೆಕರ, ಮೇನಕಾ ಶಿರೋಡಕರ, ಫೈಯಾಜ ಖಾನ, ವಿಲಾಯತ ಹುಸೇನ ಖಾನ, ಮಲ್ಲಿಕಾರ್ಜುನ ಮನಸೂರ, ನಿವೃತ್ತಿಬುವಾ ಸರನಾಯಕ, ವಿದುಷಿ ಕಿಶೋರಿ ಅಮೋಣಕರ, ಬಸವರಾಜ ರಾಜಗುರು, ಭಿಮಸೇನ ಜೋಶಿ, ಡಿ.ವಿ ಪಲುಸ್ಕರ, ಕುಮಾರ ಗಂಧರ್ವ, ವಿನಾಯಕರಾವ ಪಟವರ್ಧನ, ಬಡೇ

---

೧. ಗ್ರಂಥ "ಕರ್ನಾಟಕದ ಹಿಂದೂಸ್ತಾನಿ ಸಂಗೀತಗಾರರು," ಲೇಖಕರು-ಸದಾನಂದ ಕನವಳ್ಳಿ, ಪು. ಸಂ. ೧೪೫ ಪ್ರಕಾಶನ ೨೦೦೪.

ಗುಲಾಮ ಅಲಿಖಾನ, ಮಾಣಿಕ ವರ್ಮಾ, ಸಂಗಮೇಶ್ವರ ಗುರವ, ರವಿಶಂಕರರ ಗುರು ಅಲ್ಲಾವುದ್ದೀನ ಖಾನ (ಸರೋದ), ಅಲಿ ಅಕಬರ ಖಾನ, ಪಂಡಿತ ರವಿ ಶಂಕರ (ಸಿತಾರ), ಅಬ್ದುಲ ಹಾಲಿಮ ಜಾಫರ ಖಾನ (ಸಿತಾರ), ವಿ.ಜಿ ಜೋಗ (ವಾಯಲಿನ್), ಗಜಾನನ ರಾವ ಜೋಶಿ, (ವಾಯಲಿನ್) ವಿನಾಯಕರಾವ ಪೆಂಡಾರಕರ (ಜಲತರಂಗ), ಉಸ್ತಾದ ಉಸ್ಮಾನ ಖಾನ, ಬಾಲೇಖಾನ (ಸಿತಾರ)''[೧] ಮುಂತಾದವರು.

ಪಂಡಿತ ಬಸವರಾಜ ಬೆಂಡಿಗೇರಿಯವರು ಲಯದ ಬಗ್ಗೆ ಸೂಕ್ಷ್ಮ ಪ್ರಜ್ಞೆಯುಳ್ಳವರಾಗಿದ್ದರು. ಈ ಮೇಲೆ ತಿಳಿಸಿದ ಎಲ್ಲಾ ಸಂಗೀತಗಾರರ ಜೊತೆಗೆ ಸಾಥ ಕೊಡುವಾಗ ಆಯಾ ಸಂಗೀತಗಾರರ ಘರಾಣೆಗಳ ಪ್ರಕಾರ ಬೆಂಡಿಗೇರಿಯವರು ಸಾಥನ್ನು ಕೊಡುತ್ತಿದ್ದರು. ಅಂದರೆ ಸಂಗೀತಗಾರರ ಅವಶ್ಯಕತೆಗನುಸಾರವಾಗಿ ಠೇಕಾ, ಲಡತ ಬೇಕಾದಲ್ಲಿ ಲಡತ. ಇದಲ್ಲದೇ ಠುಮ್ರಿ, ಗಜಲ್, ಸುಗಮ ಸಂಗೀತ, ಭಕ್ತಿ ಸಂಗೀತ ಬೇಕಾದದ್ದಿರಲಿ ಪಂಡಿತ ಬಸವರಾಜ ಬೆಂಡಿಗೇರಿಯವರು ಜನರ ಪ್ರಶಂಸೆಗೆ ಪಾತ್ರರಾಗುವಂತೆ ತಬಲಾ ಸಾಥ ನೀಡುತ್ತಿದ್ದರು. ಇದೇ ರೀತಿ ತಿಹಾಯಿಗಳ ಮೂಲಕ ಸಂಗೀತಗಾರರಿಗೆ ಒಳ್ಳೆಯ ಸಹಕಾರ ನೀಡಿ ಸಮ್ಮಿಗೆ ಬರುವ ಮುನ್ಸೂಚನೆಯ ಬಗೆಗೆ ಸಂಕೇತ ಕೊಡುತ್ತಿದ್ದರು. ಪಂಡಿತ ಬಸವರಾಜ ಬೆಂಡಿಗೇರಿಯವರಿಗೆ ಅಸಂಖ್ಯ ಮಹಾನ ಕಲಾಕಾರರ ಜೊತೆಗೆ ಸಾಥ ನೀಡುವ ಸಂಧರ್ಭಗಳು ಅವಿರತ ಲಭಿಸುತ್ತಿದ್ದ ಕಾರಣ ಅವರಿಗೆ ಎಲ್ಲಾ ರಾಗ-ರಾಗಿಣಿಗಳ ಬಗೆಗೆ ಮತ್ತು ಅವುಗಳ ಚೀಜುಗಳ ಬಗೆಗೆ ಪೂರ್ಣಜ್ಞಾನವಿತ್ತು. ಇವರ ತಬಲಾ ಸಾಥ ಕೇಳಿದವರಿಗೆ ತಬಲಾ ಸಹಿತ ಹಾಡುತ್ತಿದೆಯೋ ಏನೋ ಎಂಬಂತೆ ಭಾಸವಾಗುತ್ತಿತ್ತು. ಇವರು ಲಯದಲ್ಲಿ ಚಾಚೂ ತಪ್ಪುತ್ತಿದ್ದಿಲ್ಲ. ಒಂದು ಲಯವನ್ನು ಹಿಡಿದು ಸಂಗೀತ ಸಾಗಿದಾಗ ಅದರಲ್ಲಿಯ ಪ್ರತಿ ಮಾತ್ರೆಗೂ ಎಷ್ಟೊಂದು ಮಹತ್ವ ಮತ್ತು ಕಾಲ ನಿಯಮಿತತೆ ಇರುತ್ತದೆ ಎಂಬುದರ ಬಗೆಗೆ ಪಂಡಿತ ಬಸವರಾಜ ಬೆಂಡಿಗೇರಿಯವರ ತಬಲಾ ಬಾರಿಸುವ ಪದ್ಧತಿ ಸಾಕ್ಷ್ಯಾಧಾರವಾಗಿತ್ತು. ಇವರ ತಬಲಾ ವಾದನದಲ್ಲಿ ಲಯದ ಮೇಲೆ ಸಾಧಿಸಿದ ಹಿಡಿತ ಎಷ್ಟೊಂದು ಹಿರಿಮೆಯದಾಗಿತ್ತೆಂದರೆ ''ಕರ್ನಾಟಕದ ತಿರಖ್ವಾ'' ಎಂದೇ ಇವರನ್ನು ಸಂಭೋಧಿಸುತ್ತಿದ್ದರು.

ಒಮ್ಮೆ ಉಸ್ತಾದ ಬಡೇ ಗುಲಾಮಲಿ ಖಾನರ ಗಾಯನ ಕಾರ್ಯಕ್ರಮ ೬೨-೬೩ನೇ ಇಸ್ವಿ ಹುಬ್ಬಳ್ಳಿಯಲ್ಲಿ ಇಡಲಾಗಿತ್ತು. ಬಡೇ ಗುಲಾಮಲಿ ಖಾನರು ದೊಡ್ಡ ಆಳು. ಗಿರಿಜಾ

---

೧. ಗ್ರಂಥ "ಕರ್ನಾಟಕದ ಹಿಂದೂಸ್ತಾನಿ ಸಂಗೀತಗಾರರು," ಲೇಖಕರು-ಸದಾನಂದ ಕನವಳ್ಳಿ, ಪು. ಸಂ. ೧೪೬ ಪ್ರಕಾಶನ ೨೦೦೪.

ಮಿಸೆಯುಳ್ಳವರು ಗಾಯನ ಕಲೆಯ ಅದ್ಭುತ ಸಾಧಕರು. ಇವರ ಕಾರ್ಯಕ್ರಮ ಪ್ರಾರಂಭವಾಗುವ Ä¥¬¢ Ó "'Ú« ¤æ ³æS«öÄ , öE©« B¶'[೧] ಎಂದು ಅಲ್ಲಿಯ ವ್ಯವಸ್ಥಾಪಕರನ್ನು ಕೇಳಿದರು ವ್ಯವಸ್ಥಾಪಕರು ''ಯಂಹಾ ಹೈನ''[೨] ಎಂದು ಪಂಡಿತ ಬಸವರಾಜ ಬೆಂಡಿಗೇರಿಯವರನ್ನು ತೋರಿಸಿದರು. ಆಗ ಬಡೇ ಗುಲಾಮಲಿ ಖಾನರು ಮೊದಲೇ ದೊಡ್ಡ ಆಳು. ಇವರು ಬಸವರಾಜರನ್ನು ನೋಡಿ''ಯೇ ಕ್ಯಾ ಬಜಾಯೆಂಗೆ ಹಮಾರೆ ಸಾತ'' ಎಂದು ಹಾಸ್ಯ ಮಾಡಿದದರು. ಬಸವರಾಜರು ಸುಮ್ಮನೆ ಇದ್ದರು. ಕೊನೆಗೆ ವೇದಿಕೆಯ ಮೇಲೆ ಮೊಟ್ಟ ಮೊದಲು ಬಡೇಗುಲಾಮ ಅಲಿ ಖಾನರು ಸಮ್ಮನ್ನು ಕೊಟ್ಟರು. ಬಸವರಾಜರು ದಢಾರನೆ ಅವರ ಲಯವನ್ನು ಗುರುತಿಸಿ ಠೇಕಾವನ್ನು ಹಿಡಿದರು ಬಸವರಾಜ ಈ ಒಂದು ಠೇಕಾ ಕೇಳಿ ಬಡೇ ಗುಲಾಮ ಅಲಿಯವರು ಸಂತೋಷಭರಿತರಾದರು. ನಂತರ ತಬಲಾ ಕಡೆ ಲಡತ ಮಾಡ ಹತ್ತಿದರು ಖಾನ ಸಾಹೇಬರು ಯಾವ ರೀತಿ ಲಡತ ಮಾಡುತ್ತಾರೋ ಅದೇ ರೀತಿ ಬಸವರಾಜ ಬೇಡಿಗೇರಿಯವರು ತಬಲಾ ಬೋಲುಗಳನ್ನು ನುಡಿಸ ತೊಡಗಿದರು. ಇದನ್ನು ಕೇಳುತ್ತಿದ್ದ ಬಡೇ ಗುಲಾಮ ಅಲಿಖಾನರು ಆನಂದದಿಂದ ತೂಗಾಡ ಹತ್ತಿದರು. ಕಾರ್ಯಕ್ರಮದ ಕೊನೆ ಕೊನೆಗೆ ಬಡೆ ಗುಲಾಮಲಿ ಖಾನರು ಠುಮ್ರಿಯನ್ನು ಹಾಡಲು ಪ್ರಾರಂಭಿಸಿದರು. ಠುಮ್ರಿ ಹಾಡುತ್ತಾ ಹಾಡುತ್ತಾ ಬೆಂಡಿಗೇರಿಯವರಿಗೆ ತಬಲಾದಲ್ಲಿ ಲಗ್ಗಿ ಬಾರಿಸಲು ಬಿಟ್ಟರು. ಬಸವರಾಜರು ವಿಧವಿಧವಾದ ಲಗ್ಗಿಗಳನ್ನು ಬಾರಿಸಿ ಸಮ್ಮಿಗೆ ಬಂದ ತಕ್ಷಣ ಬಸವರಾಜ ಬೆಂಡಿಗೇರಿಯವರನ್ನು ವೇದಿಕೆಯಲ್ಲಿಯೇ ಉಸ್ತಾದ ಬಡೆಗುಲಾಮಲಿಯವರು ಅಪ್ಪಿಕೊಂಡು ತಮ್ಮ ಸಂತೋಷವನ್ನು ಹಂಚಿಕೊಂಡರು. ಈ ಎಲ್ಲಾ ಕಾರ್ಯಕ್ರಮ ಮುಗಿದ ಮೇಲೆ ಎಷ್ಟೋ ವರ್ಷದ ಮೇಲೆ ಬಡೇ ಗುಲಾಮಲಿ ಖಾನರು ಹುಬ್ಬಳ್ಳಿಯ ಕಾರ್ಯಕ್ರಮಕ್ಕೆ ಆಗಮಿಸುವವರಿದ್ದರು. ಆಗ ಬಡೇ ಗುಲಾಮಲಿ ಖಾನರು ಬಸವರಾಜ ಬೆಂಡಿಗೇರಿಯವರ ತಬಲಾಕ್ಕೆ ಎಷ್ಟೊಂದು ಆಕರ್ಷಿತರಾಗಿದ್ದರೆಂದರೆ ಹುಬ್ಬಳ್ಳಿಗೆ ಬಂದರೆ ತಬಲಾ ಸಾಥಿಗೆ ಬಸವರಾಜ ಬೆಂಡಿಗೇರಿಯವರೇ ಬೇಕು ಎಂದು ಹುಬ್ಬಳ್ಳಿಯಲ್ಲಿ ಕಾರ್ಯಕ್ರಮವನ್ನು ಆಯೋಜಿಸಿದ ವ್ಯವಸ್ಥಾಕರಿಗೆ ತಿಳಿಸಿದ್ದರು.

''೧೯೫೫ ರಲ್ಲಿ ಪುಣೆಯ ಸಾವರಕರ ಸಭಾಗೃಹದಲ್ಲಿ ಸಂಗಮೇಶ್ವರ ಗುರವ ಅವರ ಗಾಯನ ಕಚೇರಿ''[೩] ಏರ್ಪಡಿಸಲಾಗಿತ್ತು. ಇವರ ಜೊತೆಗೆ ಪಂಡಿತ ಬಸವರಾಜ

---

೧. ಗ್ರಂಥ "ಕರ್ನಾಟಕದ ಹಿಂದೂಸ್ತಾನಿ ಸಂಗೀತಗಾರರು," ಲೇಖಕರು-ಸದಾನಂದ ಕನವಳ್ಳಿ, ಪು. ಸಂ. ೧೪೬ ಪ್ರಕಾಶನ ೨೦೦೪.

೨. ಅದೇ.

೩. ಗ್ರಂಥ "ಕರ್ನಾಟಕದ ಹಿಂದೂಸ್ತಾನಿ ಸಂಗೀತಗಾರರು," ಲೇಖಕರು-ಸದಾನಂದ ಕನವಳ್ಳಿ, ಪು. ಸಂ. ೧೪೭ ಪ್ರಕಾಶನ ೨೦೦೪.

ಬೆಂಡಿಗೇರಿಯವರಿಗೆ ತಬಲಾ ಸಾಥಿಗೆ ನೇಮಿಸಲಾಗಿತ್ತು. ಈ ಕಾರ್ಯಕ್ರಮವು ರಾತ್ರಿ ೯ ಘಂಟೆಗೆ ಪ್ರಾರಂಭವಾಗಿ ಬೆಳಗಿನ ಜಾವ ೭ ರವರೆಗೆಯೂ ನಡೆದರೂ ಸಹ ಗಾಯಕರು ದಣಿಯಲಿಲ್ಲ ತಬಲಾ ಸಾಥಿಯಿದ್ದ ಬಸವರಾಜ ಬೆಂಡಿಗೇರಿಯವರು ದಣಿಯಲಿಲ್ಲ ಅದರಂತೆ ಶ್ರೋತೃಗಳು ದಣಿಯದೇ ಇವರ ಈ ಒಂದು ಅದ್ಭುತ ಕಾರ್ಯಕ್ರಮವನ್ನು ಆಲಿಸಿ ಆನಂದದಿಂದ ತಮ್ಮ ತಮ್ಮ ಮನೆಗೆ ತೆರಳಿದರು.

''ತಬಲಾ ವಾದಕರು ಖ್ಯಾಲ ಗಾಯನದೊಂದಿಗೆ ಮಾತ್ರ ಸಾಥ ಮಾಡುವರು. ಧ್ರುಪದ, ಧಮಾರ, ಗಾಯನಕ್ಕೆ ಪಖಾವಜ ಸಾಥ ಇರುತ್ತದೆ. ೧೯೬೨-೬೩ ರ ಮಾತು. ಸಿದ್ಧೇಶ್ವರಿದೇವಿ ತನ್ನ ಗುರುಗಳೊಂದಿಗೆ ಬೆಳಗಾಂವಿಗೆ ಬಂದಿದ್ದರು.''[೧] ಗುರುಗಳದು ಧ್ರುಪದ, ಧಮಾರ ಗಾಯನ ನಡೆಯುವದಿತ್ತು ಆದರೆ ಪಖವಾಜ ಸಾಥಿದಾರರನ್ನು ಕರೆತರುವುದರಲ್ಲಿ ವ್ಯತ್ಯಯವಾಗಿತ್ತು. ಈ ಪ್ರಸಂಗದಲ್ಲಿ ಬಸವರಾಜ ಬೆಂಡಿಗೇರಿಯವರು ಮುಂದಾಗಿ ಧ್ರುಪದ, ಧಮಾರ ಗಾಯನಕ್ಕೆ ಬೇಕಾಗುವಂತಹ ಖುಲ್ಲಾ ಬೋಲುಗಳ ತಬಲಾ ರಚನೆಗಳನ್ನು ಅವರ ಗಾಯನಕ್ಕೆ ಸೂಕ್ತವಾಗುವಂತೆ ನುಡಿಸಿ ತಮ್ಮ ಕಲಾ ಚಾಣಾಕ್ಷತೆಯ ಪರಿಚಯವನ್ನು ತೋರಿಸಿಕೊಟ್ಟರು. ಇವರ ಈ ಒಂದು ಅದ್ಭುತ ಸಾಥ-ಸಂಗತವನ್ನು ಕೇಳಿ ಸಿದ್ಧೇಶ್ವರಿ ದೇವಿಯ ಗುರುಗಳು ''ವಾಹವಾ'' ಎಂದು ಸಂತೋಷದ ಜೊತೆಗೆ ಆಶ್ಚರ್ಯ ವ್ಯಕ್ತಗೊಳಿಸಿದರು.

ಪಂಡಿತ ಬಸವರಾಜ ಬೆಂಡಿಗೇರಿಯವರು ಮುಂಬೈಯಲ್ಲಿ ಬಿ. ಆರ್. ದೇವಧರರವರು ನಡೆಸುತ್ತಿದ್ದ ಸ್ಕೂಲ ಆಫ್ ಇಂಡಿಯನ್ ಮ್ಯುಸಿಕನಲ್ಲಿ ತಬಲಾ ಶಿಕ್ಷಕರಾಗಿ ಹಾಗೂ ಒಳ್ಳೆಯ ಸಾಥಿದಾರರೆಂದೆನಿಸಿದ್ದರಿಂದ ಪ್ರೊ.ಬಿ.ರ್ ದೇವಧರರಿಗೆ ಪಂ. ಬಸವರಾಜ ಬೆಂಡಿಗೇರಿಯವರ ತಬಲಾದ ಬಗ್ಗೆ ಬಹಳ ಪ್ರೀತಿ ಹಾಗೂ ನಂಬಿಕೆ ಇತ್ತು. ಹೀಗಿರುವಾಗ ಒಂದು ದಿನ ಪಂ ಗಜಾನನ ಬುವಾ ಜೋಶಿಯವರ ವಾಯೋಲಿನ ಕಾರ್ಯಕ್ರಮವನ್ನು ಮುಂಬೈಯಲ್ಲಿ ಇಡಲಾಗಿತ್ತು. ಗಜಾನನ ಬುವಾ ಜೋಶಿಯವರು ಮುಂಬೈಯಲ್ಲಿಯ ಖ್ಯಾತ ವಾಯೋಲಿನ ಕಲಾವಿದರು ಅವರ ಲಯದ ಹಿಡಿತವು ಎಷ್ಟೊಂದು ಗಾಢವಾಗಿತ್ತೆಂದರೆ ವಿಲಂಬಿತ ಲಯದಲ್ಲಿ ಯಾವದೇ ತಾಲವಾಗಿರಲಿ ಪ್ರತಿ ಮಾತ್ರೆಗೆ ೮ ರಂತೆ ವಿಂಗಡಿಸಿ ಆಯಾ ತಾಲಗಳ ಮಾತ್ರಾಗಳನುಸಾರವಾಗಿ ಅಂದರೆ ಉದಾ:- ಪ್ರತಿ ಮಾತ್ರಾಗೆ ೮ ರಂತೆ ವಿಂಗಡಿಸಿ ಏಕತಾಲದ ೧೨ ಮಾತ್ರಾಗಳಲ್ಲಿ ೧೨ x ೮ = ೯೬ ಅಂಶಗಳ ಲಯಕಾರಿಗಳನ್ನು ಮಾಡುತ್ತಾ ಎಷ್ಟೋ ಬೇರೆ ಬೇರೆ ತಾಲಗಳ ಆವರ್ತನಗಳನ್ನು

---

೧. ಗ್ರಂಥ "ಕರ್ನಾಟಕದ ಹಿಂದೂಸ್ತಾನಿ ಸಂಗೀತಗಾರರು," ಲೇಖಕರು-ಸದಾನಂದ ಕನವಳ್ಳಿ, ಪು. ಸಂ. ೧೪೭ ಪ್ರಕಾಶನ ೨೦೦೪.

ನಡೆಸಿಕೊಂಡು ಹೋಗುವ ಸಾಮರ್ಥ್ಯ ಉಳ್ಳವರಾಗಿದ್ದರು. ಇಂಥವರ ಜೊತೆಗೆ ತಬಲಾ ಸಾಥ ನೀಡುವದು ಅಂಥ ಇಂಥವರಿಗೆ ಅಸಾಧ್ಯ. ಇಂತಹ ಒಬ್ಬ ಲಯ ಬ್ರಹ್ಮರಾದ ಪಂ ಗಜಾನನ ಬುವಾ ಜೋಶಿಯವರು ಪ್ರೊ. ದೇವಧರವರನ್ನು "ತಬಲಾ ಸಾಥಗೆ ಯಾರನ್ನು ಕೊಡುವಿರಿ"[೧] ಎಂದು ಪ್ರಶ್ನಿಸಿದರು. ಆಗ ಪ್ರೊ.ದೇವಧರರವರು ಪಂಡಿತ ಬಸವರಾಜ ಬೆಂಡಿಗೇರಿಯವರನ್ನು ತೋರಿಸಿದರು. ಬೆಂಡಿಗೇರಿಯವರ ಆಕೃತಿಯನ್ನು ನೋಡಿ ಪಂಡಿತ ಗಜಾನನ ಬುವಾ ಜೋಶಿಯವರು ಮುಖವನ್ನು ಸಿಂಡರಿಸಿದರು. ಆಗ ಪ್ರೊ.ದೇವಧರವರು." ಅವರ ಆಕೃತಿ ತೆಗೆದುಕೊಂಡು ಏನು ಮಾಡುವದಿದೆ? ಅವರ ತಬಲಾ ಕೈಚಳಕ ನೋಡುವಿರಂತೆ. ಸುಮ್ಮನೆ ನಾನು ಹೇಳಿದಂತೆ ಅವರನ್ನು ಕರೆದು ಕೊಂಡು ಹೋಗಿರಿ"[೨] ಎಂದು ಆಶ್ವಾಸನೆ ನೀಡಿದರು. ಪಂ.ಗಜಾನನ ಬುವಾ ಜೋಶಿಯವರ ಕಾರ್ಯಕ್ರಮಕ್ಕೆ ಸಾಥ ನೀಡುವ ತಬಲಾ ಕಲಾವಿದರು ಅತ್ಯಂತ ಪ್ರವೀಣ ಲಯಕಾರರಿರಲೇ ಬೇಕಾಗಿತ್ತು. ಇಂತಹ ಪ್ರಸಂಗದಲ್ಲಿ ಪಂಡಿತ ಬಸವರಾಜ ಬೆಂಡಿಗೇರಿಯವರು ತಮ್ಮ ಕಲಾ ಪ್ರಾವೀಣ್ಯತೆಯನ್ನು ತೋರಿಸುವ ಪರಿಕ್ಷಾ ಸಮಯ ಇದಾಗಿತ್ತು. ಈ ಕಾರ್ಯಕ್ರಮ ಮುಗಿದ ನಂತರ ನಡೆದ ಆಶ್ಚರ್ಯಕರ ಸಂಗತಿಯೆಂದರೆ ಶ್ರೋತೃಗಳು ಜೋಶಿಯವರನ್ನು ಲಕ್ಷಿಸದೇ ತಬಲಾ ಸಾಥ ನೀಡಿದ ಪಂ. ಬಸವರಾಜ ಬೆಂಡಿಗೇರಿಯವರನ್ನು ಪ್ರಶಂಸಿಸಲು ಮುಗಿ ಬಿದ್ದರು. ಹೀಗಾಗಿ ಪಂಡಿತ ಗಜಾನನ ಬುವಾ ಜೋಶಿಯವರು ಸಹ ಇವರ ತಬಲಾ ಕೇಳಿ ಬಹಳ ಸಂತೋಷಗೊಂಡರು. ಇದೇ ರೀತಿಯಾಗಿ ಮುಂದೆ "೧೯೫೯-೬೦ ರಲ್ಲಿ ಕೊಲ್ಲಾಪುರದಲ್ಲಿ ಗಜಾನನರಾವ ಜೋಶಿ ವಾಯಲಿನ್ ನಿಶ್ಚಿತವಾಗಿತ್ತು.

"ಬಸವರಾಜ ಬೆಂಡಿಗೇರಿಯವರ ತಬಲಾ ರುಚಿ ಗೊತ್ತಿತ್ತಲ್ಲ! ಅವರನ್ನೇ ಕರೆದೊಯ್ದರು"[೩] ಅಲ್ಲಿಯೂ ಸಹ ವಾಯೋಲಿನ ಸಂಗೀತ ಕಾರ್ಯಕ್ರಮ ನಡೆದಾಗ ಬೆಂಡಿಗೇರಿಯವರ ತಬಲಾ ವಾದನ ಕೈ ಚಳಕಕ್ಕೆ ಹರ್ಷಗೊಂಡ ಶ್ರೋತೃಗಳು ತಮ್ಮಲ್ಲಿದ್ದ ಹಣ, ಬಂಗಾರದ ಉಂಗುರ ಮತ್ತು ಬಂಗಾರದ ಬಳೆಗಳನ್ನು ಬೆಂಡಿಗೇರಿಯವರತ್ತ ತೂರಿದರು. ಹೀಗೆಯೇ ಅವಿಸ್ಮರಣೀಯ ಕಾರ್ಯಕ್ರಮಗಳಲ್ಲಿ ಬೆಂಡಿಗೇರಿಯವರು ತಮ್ಮ ತಬಲಾ ವಾದನ ಕಲಾ ಪ್ರಾವೀಣ್ಯತೆಯನ್ನು ತೋರಿ ಜನರ ಮೆಚ್ಚುಗೆಗೆ ಪಾತ್ರರಾದರು.

---

೧. ಗ್ರಂಥ "ಕರ್ನಾಟಕದ ಹಿಂದೂಸ್ತಾನಿ ಸಂಗೀತಗಾರರು," ಲೇಖಕರು-ಸದಾನಂದ ಕನವಳ್ಳಿ, ಪು. ಸಂ. ೧೪೭ ಪ್ರಕಾಶನ ೨೦೦೪.
೨. ಗ್ರಂಥ "ಕರ್ನಾಟಕದ ಹಿಂದೂಸ್ತಾನಿ ಸಂಗೀತಗಾರರು," ಲೇಖಕರು-ಸದಾನಂದ ಕನವಳ್ಳಿ, ಪು. ಸಂ. ೧೪೭ ಪ್ರಕಾಶನ ೨೦೦೪.
೩. ಗ್ರಂಥ "ಕರ್ನಾಟಕದ ಹಿಂದೂಸ್ತಾನಿ ಸಂಗೀತಗಾರರು," ಲೇಖಕರು-ಸದಾನಂದ ಕನವಳ್ಳಿ, ಪು. ಸಂ. ೧೪೭ ಪ್ರಕಾಶನ ೨೦೦೪.

ಒಮ್ಮೆ ಶಾಂತಾ ಆಪ್ಟೆ ಇವರ ಗಾಯನ ಕಾರ್ಯಕ್ರಮ ಬೆಳಗಾಂವಿಯ ಆರ್ಟಸರ್ಕಲ್ಲಿನಲ್ಲಿ ನಿಯೋಜಿತಗೊಂಡಿತ್ತು ರಿಹರ್ಸಲ್ ಮಾಡುವಾಗ ಶಾಂತಾ ಆಪ್ಟೆ ಪಂಡಿತ ಬಸವರಾಜ ಬೆಂಡಿಗೇರಿಯವರಿಗೆ ತಾಲವನ್ನು ತೋರಿಸಲು ಹೋದರು. ಆಗ ಬೆಂಡಿಗೇರಿಯವರು "ನೀವು ಹಾಡ್ಯಾರ ಹಾಡಿರಿ ತಾಲದ ಕಾಳಜ ಬಿಡಿರಿ"[೧] ಎಂದರು ಇವರೂ ಸಹ ಪಂಡಿತ ಬಸವರಾಜ ಬೆಂಡಿಗೇರಿಯವರ ತಬಲಾ ಸಾಥಿಯನ್ನು ಕೇಳಿ "ಹೀಗೂ ಸಾಥ ಮಾಡಬಹುದೇ" ಎಂದು ಆಶ್ಚರ್ಯ ಚಕಿತರಾದರು. ಈ ರೀತಿ ಪಂಡಿತ ಬಸವರಾಜ ಬೆಂಡಿಗೇರಿ ಸಾಥ ಮಾಡದ ಸಂಗೀತಗಾರರು ಅತೀ ವಿರಳ ಹಾಗೂ ಬಸವರಾಜರಂತಹ ತಬಲಾ ಸಾಥಿದಾರರು ಸಿಗುವದೂ ಅತಿ ವಿರಳ. ಸಾಮಾನ್ಯವಾಗಿ ಒಬ್ಬೊಬ್ಬ ತಬಲಜಿ ಒಬ್ಬಬ್ಬ ಸಂಗೀತಗಾರರನ್ನು ಮಾತ್ರ ಹಿಡಿದುಕೊಂಡು ಅವರೊಂದಿಗಷ್ಟೇ ಸಾಥ ನೀಡುವದನ್ನು ರೂಢಿಸಿಕೊಂಡಿರುತ್ತಾರೆ. ಆದರೆ ಬಸವರಾಜ ಬೆಂಡಿಗೇರಿಯವರು ಮಾತ್ರ ಯಾರೊಂದಿಗೆಯಾದರೂ ಪೂರ್ವ ಸಿದ್ಧತೆಯಿಲ್ಲದೆ ತಬಲಾ ಸಾಥ ನೀಡಬಲ್ಲವರಾಗಿದ್ದರು. ಬೆಂಡಿಗೇರಿಯವರು ಹುಟ್ಟಿದ್ದೇ, ತಬಲಾ ಸಲುವಾಗಿ. ಯಾವದೇ ಸಣ್ಣ ಹುಡುಗರು ಆಗಲಿ ಅವರು ಹಾಡಿದಾಗ ಬಸವರಾಜ ಬೆಂಡಿಗೇರಿಯವರು ತಬಲಾ ನುಡಿಸಿದರೆ ಸಣ್ಣ ಹುಡುಗರಿಗೂ ಸಹ ತಬಲಾದ ಠೇಕಾ ತಿಳಿಯುತ್ತಿತ್ತು. ಅಂದರೆ ೩ ಸಣ್ಣ ಕಲಾವಿದರಿಗೆ ಯಾವ ರೀತಿ ನುಡಿಸಬೇಕು. ದೊಡ್ಡ ಕಲಾವಿದರಿಗೆ ಯಾವ ರೀತಿ ನುಡಿಸಬೇಕು ಎಂಬ ಒಂದು ತಿಳುವಳಿಕೆ ಅವರಿಗಿತ್ತು. ಒಂದೇ ಮಾತಿನಲ್ಲಿ ಹೇಳಬೇಕೆಂದರೆ ಗಾಯಕರ ಹಾಗು ಸಂಗೀತ ವಾದ್ಯಕಾರರ ಮನೋಧರ್ಮ ಮತ್ತು ಆಯಾ ಕಲಾವಿದರ ಮಟ್ಟವನ್ನು ತಿಳಿದು ತಬಲಾ ಸಾಥ ಮಾಡುವ ಜ್ಞಾನ ಪಂಡಿತ ಬಸವರಾಜ ಬೆಂಡಿಗೇರಿಯವರಿಗೆ ಲಭಿಸಿತ್ತು. ಗಾಯಕ-ವಾದಕ ಸಮ್‌ಗೆ ಬರಲು ತಡವಡಿಸಿದರೆ ಸಂಬಾಳಿಸಿಕೊಂಡು ಗಾಯಕ-ವಾದಕರ ತಪ್ಪು ಸರಿಪಡಿಸಿಕೊಂಡು ಸಾಥ ಮಾಡುವ ಜಾಣ್ಮೆ ಬಸವರಾಜ ಬೆಂಡಿಗೇರಿಯವರಿಗೆ ಸಾಧಿಸಿತ್ತು. ಒಮ್ಮೊಮ್ಮೆ ಗಾಯಕರು ಅಥವಾ ವಾದಕರು ತಂಬೂರಿ ಸರಿಪಡಿಸಿಕೊಳ್ಳಲೋ, ತಂತಿ ಸರಿಪಡಿಸಿಕೊಳ್ಳಲೋ ಮಧ್ಯದಲ್ಲಿ ನಿಂತರೆ ಬೆಂಡಿಗೇರಿಯವರೂ ಸಹ ತಬಲಾ ಠೇಕಾ ನುಡಿಸುವುದನ್ನು ನಿಲ್ಲಿಸುತ್ತಿದ್ದರು. ಆದರೆ ಬಸವರಾಜರ ತಲೆಯಲ್ಲಿಯೇ ತಾಲದ ಠೇಕಾವು ನಡೆಯುತ್ತಿತ್ತು. ಹೀಗಿರುವಾಗ ಎಷ್ಟು ಮಾತ್ರಾಗಳು ಹೋಗಿರುತ್ತಾವೊ ಅದರ-ಮುಂದಿನ ಮಾತ್ರಾದಿಂದ ತಬಲಾ ಠೇಕಾವನ್ನು ನುಡಿಸಲು ಪ್ರಾರಂಭಿಸುತ್ತಿದ್ದರು . ಇದು ತಬಲಾ ಅಭ್ಯಾಸ ಮಾಡಿದರೆ ಬರಲಾರದ ವಿಷಯ, ಸಾಕಷ್ಟು

---

೧. ಗ್ರಂಥ "ಕರ್ನಾಟಕದ ಹಿಂದೂಸ್ತಾನಿ ಸಂಗೀತಗಾರರು," ಲೇಖಕರು-ಸದಾನಂದ ಕನವಳ್ಳಿ, ಪು. ಸಂ. ೧೪೮ ಪ್ರಕಾಶನ ೨೦೦೪.

ತಬಲಾವಾದಕರು ಹತ್ತು ಹನ್ನೆರಡು ತಾಸುಗಳಷ್ಟು ಅಭ್ಯಾಸ ಮಾಡಿದರೂ ಸಹ ಬೆಂಡಿಗೇರಿಯವರ ಈ ತಬಲಾ ನುಡಿಸುವ ಶೈಲಿ ಬಹಳ ಕಡಿಮೆ ಮಂದಿಗೆ ಸಾಧ್ಯ. ಹೀಗಾಗಿ ಪಂಡಿತ ಬಸವರಾಜ ಬೆಂಡಿಗೇರಿಯವರಂತಹ ತಬಲಾ ಕಲಾವಿದರು ಸಿಗುವದು ಅತಿ ವಿರಳ.

ಪಂಡಿತ ಬಸವರಾಜ ಬೆಂಡಿಗೇರಿಯವರಿಂದ ವಿಶಾಲ ವೇದಿಕೆಯುಳ್ಳ ಧಾರವಾಡ ಮನ್ಸೂರ ಕಲಾಭವನದಲ್ಲಿ, ಕರ್ನಾಟಕ ವಿದ್ಯಾವರ್ಧಕ ಸಂಘದಲ್ಲಿ, ಧಾರವಾಡ ಹಿಂದೂ ಪ್ರಚಾರ ಸಭಾಂಗಣದಲ್ಲಿ, ಬೆಳಗಾಂವ ಆರ್ಟಸರ್ಕಲನಲ್ಲಿ, ಕುಂದಗೋಳ ನಾಡಗೇರ ವಾಡಾದ ಸವಾಯಿ ಗಂಧರ್ವ ಪುಣ್ಯತಿಥಿಯಲ್ಲಿ ಮುಂತಾದ ಕಡೆಗಳಲ್ಲಿ ಇವರ ತಬಲಾ ಕಾರ್ಯಕ್ರಮಗಳು ಜರುಗಿದ್ದು ಇವುಗಳ ಕಾಲಮಾನದ ದಾಖಲೆಗಳು ಲಭ್ಯವಿರುವದಿಲ್ಲ. ಆದರೆ ಅಸಂಖ್ಯ ಸೋಲೊ ಹಾಗೂ ಸಾಥ ಕಾರ್ಯ ಕ್ರಮಗಳು ಹಿಂದೂಸ್ತಾನದ ದೊಡ್ಡ ದೊಡ್ಡ ಶಹರಗಳಾದ ಬೆಂಗಳೂರ, ಪಾಂಡಿಚೇರಿ, ಪುಣೆ, ಮುಂಬೈ, ಬರೋಡಾ, ಅಹಮದಾಬಾದ, ಇಂದೋರ, ನಾಗಪುರ, ದೆಹಲಿ, ರಾಜಕೋಟ, ಭೊಪಾಲ ಮುಂತಾದ ಕಡೆ ಜರುಗಿದವು

## ಬ) ಮಾಧ್ಯಮ ಕಾರ್ಯಕ್ರಮಗಳು :

ಪಂಡಿತ ಬಸವರಾಜ ಬೆಂಡಿಗೇರಿಯವರು ಮನಸುಗೊಟ್ಟು ತಬಲಾ ಶಿಕ್ಷಣವನ್ನು ಗುರುಗಳಾದ ಉಸ್ತಾದ ಮೆಹಬುಬ ಖಾನ ಸಾಹೇಬ ಮಿರಜಕರ ಅವರಲ್ಲಿ ಪೂರ್ಣಗೊಳಿಸಿಕೊಂಡು ತಬಲಾ ಸೋಲೊ ಹಾಗೂ ವಿವಿಧ ಶೈಲಿಯ ಗಾಯಕ ಮತ್ತು ಸಂಗೀತ ವಾದ್ಯಕಾರರ ಜೊತೆಗೆ ಒಳ್ಳೆಯ ಸಾಥ-ಸಂಗತ ಮಾಡುವ ಮಟ್ಟಕ್ಕೆ ತಲುಪಿದರು. ಒಮ್ಮೆ ಗುರುಗಳಾದ ಮೆಹಬೂಬ ಖಾನ ಸಾಹೇಬ ಮಿರಜಕರ ಅವರು ''೧೯೩೯ ರಲ್ಲಿ ಸ್ವರ್ಗೀಯ ಪಂ. ಸವಾಯಿ ಗಂಧರ್ವರ ಸಲಹೆಯ ಮೇರೆಗೆ''[೧] ಕೇವಲ ೧೧ ವರ್ಷದ ತಮ್ಮ ಶಿಷ್ಯ ಬಸವರಾಜರನ್ನು ಸ್ವತಃ ಮುಂಬೈ ಆಕಾಶವಾಣಿ ಕೇಂದ್ರಕ್ಕೆ ಕರೆದುಕೊಂಡು ಹೋದರು. ಆಗಿನ ಕಾಲದಲ್ಲಿ ಆಕಾಶವಾಣಿ ಕೇಂದ್ರಗಳು ವಿರಳವಾಗಿದ್ದವು ಅವುಗಳಲ್ಲಿ ಮುಂಬೈಯು ಒಂದು ಆಕಾಶವಾಣಿ ಕೇಂದ್ರವಾಗಿತ್ತು. ಅಲ್ಲಿ ''ಸಂಗೀತ ಬಲ್ಲ ಬುಖಾರಿ ನಿರ್ದೇಶಕರಾಗಿದ್ದರು''[೨] ನಿಲಯದ ಕಲಾವಿದರು ಉಸ್ತಾದ ಸಮಶುದ್ದೀನ್ ಖಾನ ಹಾಗೂ ಉಸ್ತಾದ ಅಲ್ಲಾರಖಾ ಇವರು ಬಸವರಾಜ ಬೆಂಡಿಗೇರಿಯವರನ್ನು ನೋಡಿ ಇಂವಾ ತಬಲಾ ಸೋಲೊ ಬಾರಸ್ತಾನ ಎಂದು ತಮಾಷೆ ಮಾಡಿದರು. ಆಗ ಮೆಹಬೂಬ

೧. ಗ್ರಂಥ: ಹಿಂದೂಸ್ತಾನಿ ಸಂಗೀತಗಾರರು ಲೇ. ಸಿದ್ರಾಮಯ್ಯ ಮಠಪತಿ, ಪು.ಸಂ. ೧೨೨, ಪ್ರಕಾಶನ ೧೯೯೭.
೨. ಗ್ರಂಥ: ಕರ್ನಾಟಕದ ಹಿಂದೂಸ್ತಾನಿ ಸಂಗೀತಗಾರರು, ಸದಾನಂದ ಕನವಳ್ಳಿ, ಪು.ಸಂ. ೧೪೪, ಪ್ರಕಾಶನ ೨೦೦೪.

ಖಾನರು ''ನನ್ನ ಶಿಷ್ಯ ಸೋಲೊ ಚನ್ನಾಗಿ ಬಾರಿಸದಿದ್ದರೆ, ನಾನು ತಬಲಾ ಬಾರಿಸುವದನ್ನೇ ಬಿಟ್ಟು ಬಿಡುವೆ''[೧] ಎಂದು ವಿಶ್ವಾಸ ಪೂರ್ಣವಾಗಿ ನುಡಿದರು. ಹತ್ತು ನಿಮಿಷದವರಿಗೆ ತಬಲಾ ಸೋಲೊ ನುಡಿಸಿದ ಬಸವರಾಜರು ಹೊರಗೆ ಬಂದಾಗ ಉಸ್ತಾದ ಶಮಶುದ್ದೀನ್ ಖಾನ ಮತ್ತು ಉಸ್ತಾದ ಅಲ್ಲಾರಖಾ ಇವರು ಬಸವರಾಜರ ತಬಲಾ ವಾದನವನ್ನು ಕೇಳಿ ಸಂತುಷ್ಟರಾಗಿದ್ದು ''ವಾಹವಾ'' ಎಂದು ತಮ್ಮ ಮೆಚ್ಚುಗೆ ವ್ಯಕ್ತಪಡಿಸಿದರು. ಹೀಗೆ ಬಸವರಾಜ ಬೆಂಡಿಗೇರಿಯವರಿಗೆ ಗುರುಗಳಾದ ಉಸ್ತಾದ ಮೆಹಬೂಬ ಖಾನರು ತಮ್ಮ ಬಗ್ಗೆ ಇಟ್ಟುಕೊಂಡ ವಿಶ್ವಾಸವನ್ನು ಉಳಿಸಿಕೊಂಡ ಹಾಗಾಯಿತಲ್ಲದೇ ಮುಂದೆ ತಬಲಾ ನುಡಿಸಲಿಕ್ಕೂ ಧೈರ್ಯ ಬಂದಂತಾಯಿತು. ನಂತರ ಪಂಡಿತ ಬಸವರಾಜ ಬೆಂಡಿಗೇರಿಯವರಿಗೆ ಮುಂಬೈ ಆಕಾಶವಾಣಿಯಲ್ಲಿ ನಿರಂತರ ಕಾರ್ಯಕ್ರಮಗಳು ಬಂದವು. ಹೀಗೆ ಮುಂಬೈಯಲ್ಲಿಯೇ ಕೆಲಸ ಮಾಡುತ್ತ ಮುಂದೆ ''೧೯೫೦ರಲ್ಲಿ ಧಾರವಾಡದಲ್ಲಿ ಆಕಾಶವಾಣಿ ಕೇಂದ್ರ ಸ್ಥಾಪಿತವಾದಾಗ ಕಾಂಟ್ರಾಕ್ಟನ್ನು ಧಾರವಾಡಕ್ಕೆ ವರ್ಗಾಯಿಸಿಕೊಂಡರು.''[೨] ಆ ಸಮಯದಲ್ಲಿ ಧಾರವಾಡ ಆಕಾಶವಾಣಿಯು ಅದೇ ಪ್ರಾರಂಭವಾಗಿತ್ತು. ಇಲ್ಲಿ ಬಂದ ಮೇಲೆ ಬೆಂಡಿಗೇರಿಯವರು ''೧೯೫೩ ರಲ್ಲಿ ಆಕಾಶವಾಣಿಯ ' ಎ' ಗ್ರೇಡ ಕಲಾವಿದರಾದರು.''[೩]

ಪಂಡಿತ ಬಸವರಾಜ ಬೆಂಡಿಗೇರಿಯವರು ತಬಲಾದಲ್ಲಿ ನುಡಿಸಿದ ಝುಪತಾಲ, ರೂಪಕ, ಏಕತಾಲ, ಧಾರವಾಡ ಆಕಾಶವಾಣಿಯಲ್ಲಿ ಮುದ್ರಣಗೊಂಡು ಅವರ ತಬಲಾವಾದನ ಖ್ಯಾತಿಯು ಸುಪರಿಚಿತವಾಗಿದೆ. ಪಂಡಿತ ಬಸವರಾಜ ಬೆಂಡಿಗೇರಿಯವರು ಬೆಂಗಳೂರು, ಪುಣೆ, ಮುಂಬೈ , ನಾಗಪುರ, ದೆಹಲಿ, ಇಂದೋರ, ಮುಂತಾದಆಕಾಶವಾಣಿ ಕೇಂದ್ರಗಳಲ್ಲಿ ತಬಲಾ ಕಲಾ ಪ್ರದರ್ಶನ ನೀಡಿದ್ದಾರೆ. ಆಕಾಶವಾಣಿಯ ಅಖಿಲ ಭಾರತೀಯ ರೇಡಿಯೋ ಸಂಗೀತ ಸಮ್ಮೇಳನಗಳಲ್ಲಿಯೂ ಕೂಡ ಭಾಗವಹಿಸಿದ್ದಾರೆ. ಈಗಲೂ ಸಹ ಪಂಡಿತ ಬಸವರಾಜ ಬೆಂಡಿಗೇರಿಯವರ ಖ್ಯಾತಿ ದೇಶಾದ್ಯಂತ ಹಬ್ಬಿದೆ.

---

೧. ಗ್ರಂಥ: "ಕರ್ನಾಟಕದ ಹಿಂದೂಸ್ತಾನಿ ಸಂಗೀತಗಾರರು," ಸದಾನಂದ ಕನವಳ್ಳಿ, ಪು.ಸಂ. ೧೪೫, ಪ್ರಕಾಶನ ೨೦೦೪.

೨. ಗ್ರಂಥ: "ಕರ್ನಾಟಕದ ಹಿಂದೂಸ್ತಾನಿ ಸಂಗೀತಗಾರರು," ಸದಾನಂದ ಕನವಳ್ಳಿ, ಪು.ಸಂ. ೧೪೫, ಪ್ರಕಾಶನ ೨೦೦೪.

೩. ಅದೇ.

ಅಧ್ಯಾಯ - ೭

# ಪಂಡಿತ ಬಸವರಾಜ ಬೆಂಡಿಗೇರಿಯವರು ಪಡೆದ ಪ್ರಶಸ್ತಿಗಳು, ಸನ್ಮಾನಗಳು, ಪತ್ರಿಕಾ ಪ್ರಶಂಸೆಗಳು ಹಾಗೂ ಅವರ ಬಗ್ಗೆ ಗ್ರಂಥಗಳು.

ಅಧ್ಯಾಯ - ೭

# ಪಂ. ಬಸವರಾಜ ಬೆಂಡಿಗೇರಿಯವರು ಪಡೆದ ಪ್ರಶಸ್ತಿಗಳು ಮಾನಸನ್ಮಾನಗಳು, ಹಾಗೂ ಅವರ ಬಗ್ಗೆ ಲೇಖನಗಳು

"ಪಂಡಿತ ಬಸವರಾಜ ಬೆಂಡಿಗೇರಿ ಅವರಿಗೆ ಕರ್ನಾಟಕ ಸಂಗೀತ ನೃತ್ಯ ಅಕಾಡೆಮಿ ೧೯೮೩ರಲ್ಲಿ "ಕರ್ನಾಟಕ ಕಲಾ ತಿಲಕ" ಪ್ರಶಸ್ತಿ ನೀಡಿ ಗೌರವಿಸಿದೆ."[೧] ಇದೇ ರೀತಿ ಕೆಲವೊಂದು ಸಮಾಜದವರು ಹಾಗೂ ಹಲವಾರು ಸಂಘ-ಸಂಸ್ಥೆಗಳು ಇವರನ್ನು ಕರೆಸಿ ಇವರ ಕಲಾ ನೈಪುಣ್ಯತೆಗೆ ಸನ್ಮಾನಾರ್ಥವಾಗಿ ಕಾರ್ಯಕ್ರಮ ನೆರವೇರಿಸಿ ಸತ್ಕರಿಸಿದ್ದಾರೆ. ಇವರ ತಬಲಾ ವಾದನದಲ್ಲಿಯ ಪ್ರಾವೀಣ್ಯತೆಯನ್ನು ಶ್ಲಾಘಿಸಿ ಶ್ರೋತೃವೃಂದದವರು ಪಂಡಿತ ಬಸವರಾಜ ಬೆಂಡಿಗೇರಿಯವರನ್ನು "ತಬಲಾ ಪಟು", "ತಬಲಾ ಮಾಂತ್ರಿಕ", "ಲಯ ಬ್ರಹ್ಮ" ಎಂದು ಹೊಗಳಿದ್ದಾರೆ. ಶ್ರೀ ಸದಾನಂದ ಕನವಳ್ಳಿಯವರು ತಮ್ಮ ಗ್ರಂಥ "ಕರ್ನಾಟಕದ ಹಿಂದೂಸ್ತಾನಿ ಸಂಗೀತಗಾರರು" ಇದರಲ್ಲಿ, ಡಾ. ಮೀರಾ ಶಿವಶಂಕರ ಗುಂಡಿಯವರು ತಮ್ಮ ಗ್ರಂಥ "ಉತ್ತರ ಕರ್ನಾಟಕದಲ್ಲಿ ಬೆಳೆದು ಬಂದ ಹಿಂದೂಸ್ತಾನಿ ಸಂಗೀತ ಘರಾಣೆಗಳ ಒಂದು ಅಧ್ಯಯನ, ಸಿದ್ಧರಾಮಯ್ಯಾ ಮಠಪತಿ ಇವರು ತಮ್ಮ "ಹಿಂದೂಸ್ತಾನಿ ಸಂಗೀತಗಾರರು" ಹಾಗೂ ಶ್ರೀ ಸುಧೀಂದ್ರ ಮುಜುಂದಾರರವರು "ಧಾರವಾಡದ ಮರೆಯಲಾರದ ಮಹನೀಯರು" ಎಂಬ ಪುಸ್ತಕದಲ್ಲಿ ಪಂಡಿತ ಬಸವರಾಜ ಬೆಂಡಿಗೇರಿಯವರ ಬಗ್ಗೆ ಲೇಖನ ಬರೆದಿದ್ದಾರೆ. ಈ ಎಲ್ಲಾ ಗ್ರಂಥಗಳಲ್ಲಿ ಪಂಡಿತ ಬಸವರಾಜ ಬೆಂಡಿಗೇರಿಯವರ ಸಾಧನೆಗಳ ಬಗ್ಗೆ ಹಾಗೂ ಅವರ ಚರಿತ್ರೆಯ ವಿವರಗಳನ್ನು ವಿಸ್ತೃತವಾಗಿ ಸಾದರ ಪಡೆಸಿದ್ದಾರೆ. ಪಂ. ಬಸವರಾಜ ಬೆಂಡಿಗೇರಿಯವರು ಕಟ್ಟಾ ಸ್ವಾಭಿಮಾನಿಯಾಗಿದ್ದರಿಂದ ಇವರು ಯಾರಲ್ಲಿಯೂ "ನನಗೆ ಪ್ರಶಸ್ತಿ ಕೊಡಿರಿ" "ನನಗೆ ಕಾರ್ಯಕ್ರಮ ಕೊಡಿರಿ" ಎಂದು ಕೇಳುತ್ತಿದ್ದಿಲ್ಲ. ಹೀಗಾಗಿ ಇವರು ತಮ್ಮ ಜೀವಮಾನದಲ್ಲಿ ಪ್ರಶಸ್ತಿ ಪುರಸ್ಕಾರಗಳಿಗೆ ಬೆನ್ನುಹತ್ತದೆ ತಮ್ಮ ನಿಸ್ವಾರ್ಥ ಕಲಾ ಸೇವೆಯನ್ನು ಮುಂದುವರೆಸಿಕೊಂಡು ಹೋದವರು. ಇವರು ಗಳಿಸಿದ ಸಂಪತ್ತೆಂದರೆ ಇವರು ಸೃಜಿಸಿದ ಉತ್ತಮ ದರ್ಜೆಯ ಶಿಷ್ಯರತ್ನಗಳೇ ಆಗಿವೆ. ಪಂ. ಬಸವರಾಜ ಬೆಂಡಿಗೇರಿಯವರ ಅತ್ಯಂತ ಪ್ರಿಯ ಶಿಷ್ಯರೆಂದರೆ ಶ್ರೀ ಪಂಡಿತ ರಘುನಾಥ ನಾಕೋಡರವರು. ಇವರು ದೇಶ ವಿದೇಶಗಳಲ್ಲಿ

---

೧. ಗ್ರಂಥ "ಕರ್ನಾಟಕದ ಹಿಂದೂಸ್ಥಾನಿ ಸಂಗೀತಗಾರರು," ಲೇಖಕರು-ಸದಾನಂದ ಕನವಳ್ಳಿ, ಪು. ಸಂ. ೧೫೦ ಪ್ರಕಾಶನ ೨೦೦೪.

ತಬಲಾ ನುಡಿಸಿ ಹೆಸರನ್ನು ಗಳಿಸಿದ್ದಾರೆ, ಹಾಗೂ ಧಾರವಾಡ ಆಕಾಶವಾಣಿಯ "ಎ ಟಾಪ್" ಗ್ರೇಡ್‌ನಲ್ಲಿ ನಿಯುಕ್ತರಾಗಿರುವರು. ಕರ್ನಾಟಕದಲ್ಲಿ ಪ್ರಪ್ರಥಮರಾಗಿ ಈ ಗ್ರೇಡನ್ನು ಪಡೆದವರಾಗಿದ್ದಾರೆ. ಮತ್ತು ಭಾರತದಲ್ಲಿ ಈ ಗ್ರೇಡಿನ ಕೆಲವೇ ಕೆಲವು ತಬಲಾ ಕಲಾವಿದರಲ್ಲಿ ಪಂಡಿತ ರಘುನಾಥ ನಾಕೋಡರವರು ಒಬ್ಬರಾಗಿದ್ದಾರೆ. ಈ ರೀತಿಯಾಗಿ ಪಂಡಿತ ರಘುನಾಥ ನಾಕೋಡರವರು ಗುರುಗಳಿಗೆ ಲಭ್ಯವಾಗದ ಪ್ರಶಸ್ತಿಗಳನ್ನು ತಮ್ಮ ಗುರುಗಳಿಂದ ಪಡೆದ ತಬಲಾ ಶಿಕ್ಷಣದ ಮುಖಾಂತರ ಗಳಿಸಿ ಪಂಡಿತ ಬಸವರಾಜ ಬೆಂಡಿಗೇರಿಯವರ ಹೆಸರನ್ನು ಅಜರಾಮರಗೊಳಿಸಿದ್ದಾರೆ. ಇದೇ ರೀತಿ ಇನ್ನೂ ಅನೇಕ ಶಿಷ್ಯರು ಇವರಲ್ಲಿ ಕಲಿತವರು ಹೆಸರು ಗಳಿಸುತ್ತಿದ್ದಾರೆ. ನಿಜಕ್ಕೂ ಪಂ. ಬಸವರಾಜ ಬೆಂಡಿಗೇರಿಯವರು ರಘುನಾಥ ನಾಕೋಡರಂತಹ ಶಿಷ್ಯರನ್ನು ತಬಲಾದಲ್ಲಿ 'ಎ' ಟಾಪ್ ಶ್ರೇಣಿಯ ಕಲಾವಿದರನ್ನಾಗಿ ಮಾಡಬೇಕೆಂದರೆ ಅವರ ತಬಲಾ ಜ್ಞಾನ ಯಾವ ಮಟ್ಟದ್ದು ಇತ್ತು ಮತ್ತು ಅವರಿಗೆ ಎಷ್ಟು ಪ್ರಶಸ್ತಿಗಳು ಸಿಗಬೇಕಾಗಿತ್ತು ಎಂದು ಊಹಿಸಬಹುದು. ಆದಾಗ್ಯೂ ಇವರ ಬಗ್ಗೆ ಯಾವ ಪತ್ರಿಕಾ ಪ್ರಶಂಸೆಗಳು ಲಭ್ಯವಾಗಿಲ್ಲ.

## ಅಧ್ಯಾಯ-೮

# ಪಂಡಿತ ಬಸವರಾಜ ಬೆಂಡಿಗೇರಿಯವರ ಶಿಷ್ಯ ಪರಂಪರೆ ಹಾಗೂ ಶಿಷ್ಯರ ಸಾಧನೆಗಳು

ಸಂಗೀತ, ವಾದ್ಯ, ನೃತ್ಯ ಅಥವಾ ಬೇರೆ ಯಾವದೇ ವಿಷಯವಾಗಲಿ ಗುರುಗಳ ಮುಖಾಂತರವೇ ಕಲಿಯಲು ಸಾಧ್ಯವಿದೆ. ಗುರುಗಳು ವಿದ್ಯೆಯಲ್ಲಿ ಜ್ಞಾನವನ್ನು ಮತ್ತು ಒಳ್ಳೆಯ ಗುಣಗಳನ್ನು ಹೊಂದಿದವರಾಗಿರಬೇಕು ಮತ್ತು ಯಾವ ರೀತಿ ಶಿಷ್ಯರಿಗೆ ವಿದ್ಯೆಯನ್ನು ಕಲಿಸಬೇಕು ಎನ್ನುವ ಜಾಣ್ಮೆಯನ್ನು ಗುರುಗಳು ಹೊಂದಿರಬೇಕು. ಚಿಕ್ಕವರಾಗಲಿ, ದೊಡ್ಡವರಾಗಲಿ ಅವರವರ ಮನೋಭಾವನೆಗಳನ್ನು ಅರಿತುಕೊಂಡು ವಿದ್ಯೆಯನ್ನು ಕಲಿಸುವವರೇ ನಿಜವಾದ ಗುರುಗಳೆನ್ನಿಸಿಕೊಳ್ಳುವರು. ಇಂತಹ ಒಂದು ಅದ್ಭುತವಾದ ತಬಲಾ ಕಲಿಸುವ ಕಲೆಯು ಪಂಡಿತ ಬಸವರಾಜ ಬೆಂಡಿಗೇರಿಯವರಿಗೆ ದೈವದತ್ತವಾಗಿಯೇ ಲಭಿಸಿತ್ತು. ಪಂ. ಬಸವರಾಜ ಬೆಂಡಿಗೇರಿಯವರು ಗುರುದಕ್ಷಿಣೆ ಆಶೆಯನ್ನು ಮಾಡದೇ ತಮ್ಮ ಶಿಷ್ಯರಿಗೆ ತಬಲಾವನ್ನು ಹೇಳಿಕೊಡುತ್ತಿದ್ದರು. ಶಿಷ್ಯರೇ ಏನಾದರು ಗುರುದಕ್ಷಿಣೆ ತೆಗೆದುಕೊಳ್ಳಿರಿ ಎಂದು ಹಠ ಹಿಡಿದರೆ ಸುಮ್ಮನೆ ತೆಗೆದುಕೊಂಡು ಇದೆಲ್ಲ ಯಾಕೆ ಎಂದು ಹೇಳುತ್ತಿದ್ದರು. ಪಂ. ಬಸವರಾಜ ಬೆಂಡಿಗೇರಿಯವರಿಗೆ ಯಾರಾದರೂ ಬಂದು ಗುರುಗಳೇ ಏನಾದರೂ ಬೋಲುಗಳನ್ನು ಹೇಳಿಕೊಡಿರಿ ಎಂದರೆ ಸಾಕು. ಅವರು ಇವರ ಶಿಷ್ಯರು ಅವರ ಶಿಷ್ಯರು ಎಂದು ಏನೂ ಯೋಚಿಸದೇ ತಬಲಾ ಬೋಲುಗಳನ್ನು ಅತೀ ಪ್ರಿತಿಯಿಂದ ಹೇಳಿಕೊಡುತ್ತಿದ್ದರು. ಪಂಡಿತ ಬಸವರಾಜ ಬೆಂಡಿಗೇರಿಯವರು ತಮ್ಮ ತಬಲಾ ವಾದನ ವಿದ್ಯೆಯನ್ನು ಶಿಷ್ಯವೃಂದದಲ್ಲಿ ಧಾರಳವಾಗಿ ಪ್ರದಾನಮಾಡಿ ಅವರನ್ನು ತಬಲಾ ಕಲೆಯಲ್ಲಿ ನಿಷ್ಣಾತರನ್ನಾಗಿ ಮಾಡಿದ್ದಾರೆ. ಇವರ ಶಿಷ್ಯವೃಂದದಲ್ಲಿ ಪ್ರಮುಖರಾದವರೆಂದರೆ ದಿ.ಪಂ.ವೀರಣ್ಣ ಕಾಮಕರ, ಶ್ರೀ.ಎಸ್.ಪಿ.ವೇರ್ಣೇಕರ, ಪಂಡಿತ ರಘುನಾಥ ನಾಕೋಡ, ಡಾ. ರಾಚಯ್ಯಾ ಹಿರೇಮಠ, ಪ್ರೊ.ಎಸ್.ಸಿ. ಬಳ್ಳೂರ, ಶ್ರೀ. ಎಂ. ಎಸ್. ಆರಾಧ್ಯಮಠ, ಶ್ರೀ. ಸುಧೀಂದ್ರ ಮುಜುಂದಾರ, ಶ್ರೀ.ನಂದಿಕೇಶ್ವರ ಗುರವ, ಶ್ರೀ ಶಾಂತಲಿಂಗ ದೇಸಾಯಿ, ಶ್ರೀ. ಎಸ್. ಎಮ್.ನಿಡಗುಂದಿ, ಶ್ರೀ.ನಿಸ್ಸಾರ ಅಹಮದ, ಶ್ರೀ ಸಂತೋಷ ಕುಲಕರ್ಣಿ, ಶ್ರೀ. ಶಶಿಭೂಷಣ ಗುರ್ಜರ, ಶ್ರೀ. ಆರ್.ಪಿ. ಜೋಶಿ, ಶ್ರೀ. ನೀಲಕಂಠ ಬಡಿಗೇರ, ಶ್ರೀ. ಪ್ರಕಾಶ ಕಾಮತ, ಶ್ರೀ ಎಸ್.ವ್ಹಿ. ದೇಶಪಾಂಡೆ ಮುಂತಾದವರಾಗಿದ್ದಾರೆ.

# ೧. ದಿ. ಪಂಡಿತ ವೀರಣ್ಣಾ ನಿಂಗಪ್ಪಾ ಕಾಮಕರ್



ಸಂಗೀತಕ್ಕಾಗಿಯೇ ತಮ್ಮ ಜೀವನವನ್ನು ಮುಡಿಪಾಗಿಟ್ಟು ಎಲೆಮರೆಯ ಕಾಯಿಯಂತಿರುವ ಸಂಗೀತ ವಿದ್ವಾನ ಪಂ. ವೀರಣ್ಣಾ ಕಾಮಕರ್ ಸಂಗೀತ ಕ್ಷೇತ್ರಕ್ಕೆ ಅಪಾರ ಕೊಡುಗೆ ನೀಡಿದ್ದಾರೆ. ಸಂಗೀತದ ತವರಾದ ಧಾರವಾಡ ಜಿಲ್ಲೆಯ ಸಂಗೀತ ಕ್ಷೇತ್ರವನ್ನು ಖ್ಯಾತಿಗೊಳಿಸಿದವರಲ್ಲಿ ಇವರೂ ಒಬ್ಬರು ಎಂದರೆ ತಪ್ಪಾಗಲಾರದು. ಇವರು೯-೦೧-೧೯೨೬ರಲ್ಲಿ ಜನಿಸಿದರು. ಬಾಲ್ಯದಲ್ಲಿ ತಾಯಿಯಿಂದಲೇ ಸಂಗೀತದ ಸವಿ ಸವಿದ ಇವರು ತಮ್ಮ ತಬಲಾ ಅಭ್ಯಾಸವನ್ನು ೧೫ನೇ ವಯಸ್ಸಿನಲ್ಲಿ ಪಂಡಿತ ಬಸವರಾಜ ಬೆಂಡಿಗೇರಿ ಯವರಲ್ಲಿ ಆರಂಭಿಸಿದರು. ಇವರು ತಬಲಾದ ಜೊತೆಗೆ ಸಿತಾರ ಹಾಗೂ ಗಾಯನವನ್ನು ಕೂಡ ಕಲಿತರು. ಪಂಡಿತ ವೀರಣ್ಣಾ ಕಾಮಕರವರು ಪಂಡಿತ ಬಸವರಾಜ ಬೆಂಡಿಗೇರಿಯವರಲ್ಲಿ ಶಿಷ್ಯರಿದ್ದರೂ ವಯಸ್ಸಿನಲ್ಲಿ ದೊಡ್ಡವರಿದ್ದ ಕಾರಣ ಬೆಂಡಿಗೇರಿಯವರು ಮಿತ್ರರ ಹಾಗೆ ಕಾಮಕರವರನ್ನು ಕಾಣುತ್ತಿದ್ದರು ಮತ್ತು ಸಾಕಷ್ಟು ತಬಲಾ ಬೋಲುಗಳ ಸಂಗ್ರಹವನ್ನು ಪಂ. ವೀರಣ್ಣಾ ಕಾಮಕರವರಿಗೆ ಪಂಡಿತ ಬಸವರಾಜ ಬೆಂಡಿಗೇರಿಯವರು ಕೊಟ್ಟರು.

ತಬಲಾ ಅಭ್ಯಾಸ ಮಾಡುತ್ತಿರುವಾಗಲೇ ಹುಬ್ಬಳ್ಳಿಯ ಮಹಿಳಾ ವಿದ್ಯಾಪೀಠದಲ್ಲಿ ಸತತ ೩೦ ವರ್ಷಗಳ ಕಾಲ ಸಂಗೀತ ಶಿಕ್ಷಕರಾಗಿ ಸೇವೆ ಸಲ್ಲಿಸುತ್ತಾ ಇದರ ಜೊತೆಗೆ ತಮ್ಮದೇ ಆದ "ಗಾಯತ್ರೀ ಗಾಯನ ಶಾಲಾ" ಎಂಬ ಸಂಗೀತ ಪಾಠ ಶಾಲೆಯನ್ನು ೧೯೬೩ರಲ್ಲಿ ಹುಬ್ಬಳ್ಳಿಯಲ್ಲಿ ಪ್ರಾರಂಭಿಸಿದರು. ಗುರುಗಳಾದ ಪಂಡಿತ ಬಸವರಾಜ ಬೆಂಡಿಗೇರಿಯವರು ಹೇಳಿ ಕೊಟ್ಟ ತಬಲಾ ವಿದ್ಯೆಯನ್ನು ಸಾಕಷ್ಟು ಶಿಷ್ಯರಿಗೆ ಹೇಳಿಕೊಟ್ಟು ರಾಷ್ಟ್ರೀಯ ಹಾಗೂ ಅಂತರಾಷ್ಟ್ರೀಯ ಕಲಾಕಾರರನ್ನಾಗಿ ಮಾಡಿದ ಹೆಗ್ಗಳಿಕೆ ಇವರದಾಗಿದೆ. ಆ ಪ್ರಮುಖ ಶಿಷ್ಯರು ಹೀಗಿದ್ದಾರೆ. ಪಂ.ರಘುನಾಥ ನಾಕೋಡ, ಶ್ರೀ ರವಿಂದ್ರ ಯಾವಗಲ್, ಶ್ರೀ ವಿಶ್ವನಾಥ ನಾಕೋಡ,

ಶ್ರೀ.ರಾಜೇಂದ್ರ ನಾಕೋಡ, ಮಗಳಾದ ಗಾಯತ್ರಿ ಕಾಮಕರ ಇವರಲ್ಲದೇ ಉಳಿದ ಶಿಷ್ಯರು ಹೀಗಿದ್ದಾರೆ ಶ್ರೀ ಶಶಿ ಕುಲಕರ್ಣಿ, ಶ್ರೀ ಗಣೇಶ ಓಕಡೆ, ಶ್ರೀ ರಾಜೇಶ ಧವಳೆ, ಶ್ರೀ. ರಘುನಾಥ ಸವಡಿ, ಶ್ರೀ ಚಿದಂಬರ ಚಟ್ಟರಕಿ, ಶ್ರೀ ಶ್ರೀನಿವಾಸ ಮಾಗಣಗೇರಿ, ಶ್ರೀ ಶ್ರೀವತ್ಸ ಕೌಲಗಿ, ಶ್ರೀ.ಮೃತ್ಯುಂಜಯ ಕುರಬರ. ಈ ಮುಂತಾದವರು ವೀರಣ್ಣಾ ಕಾಮಕರವರಲ್ಲಿ ಕಲಿತು ಈಗ ಅವರು ಮಗಳಾದ ಗಾಯತ್ರಿಯವರ ಕಡೆ ತಬಲಾ ಕಲಿಯುತ್ತಿದ್ದಾರೆ.

ಕರ್ನಾಟಕ ರಾಜ್ಯ ಸರಕಾರದಿಂದ ಅನುದಾನ ಪಡೆದಿರುವ ಗಾಯತ್ರಿ ಶಾಲೆಯ ವಿದ್ಯಾರ್ಥಿಗಳು ಪ್ರತಿ ವರ್ಷ ಕರ್ನಾಟಕ ಪ್ರೌಢ ಶಿಕ್ಷಣಾ ಮಂಡಳಿ ನಡೆಸುತ್ತಿರುವ ಜ್ಯೂನಿಯರ, ಸಿನಿಯರ್, ವಿದ್ವತ ಪರೀಕ್ಷೆಗಳಲ್ಲಿ ಉತ್ತಮ ದರ್ಜೆಯಲ್ಲಿ ಉತ್ತೀರ್ಣರಾಗುತ್ತಿದ್ದಾರೆ. ಅಲ್ಲದೆ ರಾಷ್ಟ್ರೀಯ ಶಿಷ್ಯವೇತನವನ್ನು ಪಡೆಯುತ್ತಿದ್ದಾರೆ.

ಪಂಡಿತ ವೀರಣ್ಣಾ ಕಾಮಕರವರ ಈ ರೀತಿಯಾದ ವಿದ್ವತ್ತವನ್ನು ನೋಡಿ ಕರ್ನಾಟಕ ಸರಕಾರವು ೧೯-೦೧-೨೦೦೩ರಂದು "ಕರ್ನಾಟಕ ಕಲಾ ತಿಲಕ" ವೆಂಬ ಪ್ರಶಸ್ತಿಯನ್ನು ಕೊಟ್ಟು ಸನ್ಮಾನಿಸಲಾಯಿತು. ಪಂಡಿತ ವೀರಣ್ಣಾ ಕಾಮಕರವರು ಅನೇಕ ಶಿಷ್ಯರಿಗೆ ವಿದ್ಯಾದಾನವನ್ನು ಮಾಡುತ್ತ ೨೮-೨-೨೦೦೩ ರಂದು ಐಕ್ಯರಾದರು. ವೀರಣ್ಣ ಕಾಮಕರವರು ನಡೆಸುತ್ತಿದ್ದ ಗಾಯತ್ರಿ ಗಾಯನ ಶಾಲೆಯನ್ನು ಅವರ ಮಗಳಾದ ಗಾಯತ್ರಿಯವರು ನಡೆಸಿಕೊಂಡು ಹೊರಟಿದ್ದಾರೆ.

## ೨. ಪಂಡಿತ ರಘುನಾಥ ನಾಕೋಡ



೧೭-೦೧-೧೯೫೪ ರಲ್ಲಿ ರಘುನಾಥ ನಾಕೋಡರವರು ಸುಪ್ರಸಿದ್ಧ ಸಂಗೀತ ಕುಟುಂಬದಲ್ಲಿ ಜನಿಸಿದರು. ಇವರ ತಂದೆಯವರಾದ ಪಂಡಿತ ಅರ್ಜುನ ಸಾ. ನಾಕೋಡರವರು ಇವರನ್ನು ಸಂಗೀತ ಪ್ರಪಂಚಕ್ಕೆ ಪರಿಚಯಿಸಿದರು. ಹುಬ್ಬಳ್ಳಿಯವರಾದ ಶ್ರೀ ವೀರಣ್ಣ ಕಾಮ್ಕರವರು ಇವರ ಮೊದಲ ಗುರುವಾಗಿದ್ದರು. ಇವರು ತಾಲದ ಮೂಲವನ್ನು ಪಂಡಿತ ರಘುನಾಥ ನಾಕೋಡರವರಿಗೆ ಕಲಿಸಿದರು. ನಂತರ ( ಉಸ್ತಾದ ಮೆಹಬೂಬಖಾನ್ ಸಾಹೇಬ ಮೀರಜ್‌ಕರ್‌ರವರ ಶೈಲಿಯನ್ನು ಅಳವಡಿಸಿಕೊಂಡಿರುವ) ಪಂಡಿತ ಬಸವರಾಜ ಬೆಂಡಿಗೇರಿಯವರ ಕಟ್ಟುನಿಟ್ಟಿನ ತರಬೇತಿಯಿಂದಾಗಿ ಇವರು ಒಬ್ಬ ಯೋಗ್ಯ ಕಲಾವಿದರಾಗಿ ಪರಿವರ್ತನೆಯಾದರು. ಪಂಡಿತ ರಘುನಾಥ ನಾಕೋಡರವರಿಗೆ ಹೈದರಾಬಾದಿನ ಉಸ್ತಾದ ಶೇಖ್ ದಾವೂದಖಾನ್ ಮತ್ತು ಗುರುಬಂಧು ನಂದಕುಮಾರ ಇವರಿಂದ ತರಬೇತಿಯನ್ನು ಪಡೆಯುವ ಭಾಗ್ಯ ಲಭಿಸಿತು. ಒಂದು ವರ್ಷದ ನಿರಂತರ ಅಚ್ಚುಕಟ್ಟಿನ ತರಬೇತಿ ಇವರಿಗೆ ದೃಢವಾದ ತಳಹದಿಯನ್ನು ಹಾಕಿಕೊಟ್ಟಿತು. ಇದರಿಂದ ಇವರು ತರುಣ ವಯಸ್ಸಿನಲ್ಲಿಯೇ ಒಬ್ಬ ಯೋಗ್ಯ ತಬಲಾವಾದನ ಕಲಾ ಪ್ರವೀಣರಾದರು.

೧೯೭೭ರಲ್ಲಿ ಪಂಡಿತ ರಘುನಾಥ ನಾಕೋಡರವರು ಮಂಗಳೂರಿನ ಆಕಾಶವಾಣಿ ತಬಲಾ ವಾದಕರಾಗಿ ಆಯ್ಕೆಯಾದರು. ಇದರಿಂದ ಅವರು ಹೊರಗಿನ ಪ್ರಪಂಚಕ್ಕೆ ಪರಿಚಯವಾಗಲು ಹಾಗೂ ಹಿಂದೂಸ್ಥಾನಿ ಸಂಗೀತವನ್ನು ಬೆಳೆಸುವಲ್ಲಿ ಸಹಾಯವಾಯಿತು. ಈಗ ಇವರು ಆಕಾಶವಾಣಿ ಹಾಗೂ ದೂರದರ್ಶನ ಕೇಂದ್ರಗಳಲ್ಲಿ ಅತ್ಯುತ್ತಮ ಸಾಲಿಗೆ ಸೇರಿದ ಕಲಾವಿದರಾಗಿದ್ದಾರೆ. ರಘುನಾಥ ನಾಕೋಡರವರು ೧೯೮೦ ರಿಂದ ಆಕಾಶವಾಣಿ ಧಾರವಾಡದಲ್ಲಿ ಸೇವೆ ಸಲ್ಲಿಸುತ್ತಾ

ಬಂದಿದ್ದಾರೆ.

ಇವರು ನಾಲ್ಕು ಘರಾಣಾಗಳಾದ ಅಜರಡಾ, ದಿಲ್ಲಿ, ಪೂರಬ ಮತ್ತು ಪಂಜಾಬಗಳಲ್ಲಿರುವ ಉತ್ತಮ ಅಂಶಗಳನ್ನು ತಮ್ಮ ಶೈಲಿಯಲ್ಲಿ ಅಳವಡಿಸಿಕೊಂಡಿರುತ್ತಾರೆ. ಇಂದು ಇವರು ದೇಶದಲ್ಲಿ ಒಬ್ಬ ಹೆಸರುವಾಸಿಯಾದ ಸುಸಂಸ್ಕೃತ ತಬಲಾ ವಾದಕರಾಗಿದ್ದಾರೆ.

**ಸಾರ್ವಜನಿಕ ಪ್ರದರ್ಶನಗಳು (ಸಾಧನೆಗಳು) :**

ಇವರು ಭಾರತ ಹಾಗೂ ಜಗತ್ತಿನಾದ್ಯಂತ ನಡೆಯುವ ಹಲವಾರು ಪ್ರತಿಷ್ಠಿತ ಸಂಗೀತ ಸಭೆ ಸಮಾರಂಭಗಳಲ್ಲಿ ಭಾಗವಹಿಸಿರುತ್ತಾರೆ.

೧೯೮೮ರಲ್ಲಿ ಲಂಡನ್ನಿನ ಮ್ಯಾಂಚೆಸ್ಟರ್‌ನಲ್ಲಿ ವರ್ಲ್ಡ್ ಕನ್ನಡ ಮೀಟ್, ೧೯೬೬ರಲ್ಲಿ ಫ್ರಾನ್ಸಿನಲ್ಲಿ ಕಲಾ ವಿಸ್ತಾರ ಸಾಂಸ್ಕೃತಿಕ ವಿನಿಮಯ ಕಾರ್ಯಕ್ರಮಗಳಲ್ಲಿ ಭಾಗವಹಿಸಿರುತ್ತಾರೆ. ಹಲವಾರು ಸಲ ಆಕಾಶವಾಣಿ ಸಮ್ಮೇಳನಗಳಲ್ಲಿ ಹಾಗೂ ರಾಷ್ಟ್ರೀಯ ಕಾರ್ಯಕ್ರಮಗಳಲ್ಲಿ ಪ್ರಸಿದ್ಧ ಕಲಾವಿದರಾದ ಪಂಡಿತ ಮಲ್ಲಿಕಾರ್ಜುನ ಮನ್ಸೂರ, ಪಂಡಿತ ಬಸವರಾಜ ರಾಜಗುರು, ಡಾ॥ ಪ್ರಭಾ ಅತ್ರೆ, ವಿದ್ವಾನ ಎಂ. ಜಿ. ಗೋಪಾಲ ಕೃಷ್ಣನ್ (ವಯೋಲಿನ್), ಪಂಡಿತ ನಂದಲಾಲ ಗಣೇಶ್ (ಸರೋದ), ಪಂಡಿತ ವೆಂಕಟೇಶ ಗೋಡಖಿಂಡಿ (ಕೊಳಲು), ಶ್ರೀಮತಿ ಜಯಶ್ರೀ ಪಾಟ್ನೇಕರ, ಡಾ॥ ರಾಜಶೇಖರ ಮನ್ಸೂರ, ಪಂಡಿತ ವೆಂಕಟೇಶ ಕುಮಾರ, ಪಂಡಿತ ಗಣಪತಿಭಟ್ ಮತ್ತು ಶ್ರೀ.ಡಿ.ಕುಮಾರದಾಸ, ಪಂಡಿತ ಬಾಲಚಂದ್ರ ನಾಕೋಡ, ಶ್ರೀ.ಶ್ರೀಪಾದ ಹೆಗಡೆ, ಜಯತೀರ್ಥ ಮೇವುಂಡಿ (ಗಾಯನ) ಇವರುಗಳಿಗೆ ತಬಲಾ ಸಾಥಿಯಾಗಿ ಭಾಗವಹಿಸಿ ಯಶಸ್ವಿಯಾಗಿರುತ್ತಾರೆ.

ಪ್ರಸಿದ್ಧ ಹಾಡುಗಾರರಾದ ಪಂಡಿತ ಸಿ. ಆರ್. ವ್ಯಾಸ, ಪಂಡಿತ ಯಶವಂತ ಬುವಾಜೋಶಿ, ಪಂಡಿತ ಜಸರಾಜ, ಪಂ.ರಾಜನ್, ಸಾಜನ್ ಮಿಶ್ರಾ, ಪಂಡಿತ ಜಗದೀಶ ಪ್ರಸಾದ, ಶ್ರೀಮತಿ ಲಲಿತ್ ಜೆ. ರಾವ್, ಶ್ರೀಮತಿ ಶುಭದಾ ಪರಾಡಕರ್, ಶ್ರೀಮತಿ ಅಶ್ವಿನಿ ಭಿಡೆ ದೇಶಪಾಂಡೆ ಮತ್ತು ವಾದ್ಯಗಾರರಾದ ಉಸ್ತಾದ ಶಾಹೀದ ಪರ್ವೇಜ, ಪಂಡಿತ ಬ್ರಿಜ್ ನಾರಾಯಣ, ಪಂಡಿತ ವಿಶ್ವ ಮೋಹನಭಟ್, ಡಾ॥ ಎನ್. ಆರ್. ರಾಜನ್, ಉಸ್ತಾದ ಬಾಲೆಖಾನ, ಶ್ರಿ ನಿಶಾದ ಖಾನ್, ಪಂಡಿತ ವಿ.ಜಿ. ಜೋಗ, ಪಂಡಿತ ಮಣಿ ಪ್ರಸಾದ ಮುಂತಾದವರಿಗೆ ಹಲವಾರು ಬಾರಿ ಸಮರ್ಥ ತಬಲಾ ಸಾಥಿಯಾಗಿ ಸಂಗೀತ ಕಾರ್ಯಕ್ರಮಗಳಲ್ಲಿ ಭಾಗವಹಿಸಿರುತ್ತಾರೆ.

**ತಬಲಾ ಸೋಲೋ :**

ಪಂಡಿತ ನಾಕೋಡರವರುಸೋಲೊ ನುಡಿಸುವುದರಲ್ಲಿ ತುಂಬಾ ಪ್ರವೀಣರಾಗಿರುತ್ತಾರೆ.

ಇವರ ಸಂಗೀತ ಕಛೇರಿಗಳಲ್ಲಿ ಬೊಬಿಲಿ (ಆ.ಪ್ರ.) ರಾಷ್ಟ್ರೀಯ ಭಾವೈಕ್ಯತೆಗಾಗಿ ಮಾಡಿದ ರಾಷ್ಟ್ರೀಯ ಸಾಂಸ್ಕೃತಿಕ ಸಮಾರಂಭ, ಬಂದೀಶ ಮುಂಬೈ, ಉಸ್ತಾದ ಅಮೀರ ಹುಸೇನ್ ಖಾನ್ ಇವರ ನೆನಪಿಗಾಗಿ ಮಾಡಿದ ದಿನಾಚರಣೆ, ಪಂಡಿತ ಗುರುರಾವ್ ದೇಶಪಾಂಡೆ, ಸ್ಮೃತಿ ಸಮಾರೋಹ

ಬೆಂಗಳೂರು, ದರ್ಬಾರ್‌ಹಾಲ್ ಕಛೇರಿ ಮೈಸೂರು, ಪಂಚಾಕ್ಷರಿ ಗವಾಯಿ ಸಂಗೀತ ದಿನಾಚರಣೆ ಗದಗ ಇವುಗಳು ಪ್ರಮುಖವಾದವುಗಳು.

ಸಂಗೀತ ಕ್ಯಾಸೆಟ್ ರೆಕಾರ್ಡಿಂಗ್ ಕಾರ್ಪೊರೇಷನ್ ಇವರು ಒಬ್ಬರೇ ತಬಲಾ ನುಡಿಸಿದ ಕ್ಯಾಸೆಟ್‌ಗಳನ್ನು ರೆಕಾರ್ಡ್ ಮಾಡಿ ಬಿಡುಗಡೆ ಮಾಡಿರುತ್ತಾರೆ.

**ಇವರು ಪಡೆದ ಪುರಸ್ಕಾರಗಳು :**

೧. ೧೯೯೨ರಲ್ಲಿ ನಡೆದ ಕರ್ನಾಟಕ ರಾಜ್ಯೋತ್ಸವದಲ್ಲಿ ಪಂಡಿತ ರಘುನಾಥ ನಾಕೋಡ ಇವರಿಗೆ ರಾಜ್ಯೋತ್ಸವ ಪ್ರಶಸ್ತಿ ನೀಡಿ ಗೌರವಿಸಿದ್ದಾರೆ.

೨. ಶ್ರೀ ಪುರಂದರ ತ್ಯಾಗರಾಜ ಆರಾಧನೋತ್ಸವ ಸಮಿತಿ ಮೈಸೂರು ಇವರು ೨೦೦೨ರಲ್ಲಿ "ಸಂಗೀತ ಕಲಾ ತಪಸ್ವಿ" ಎಂಬ ಬಿರುದನ್ನು ನೀಡಿ ಇವರನ್ನು ಸನ್ಮಾನಿಸಿದೆ.

೩. ೨೦೦೨ರಲ್ಲಿ ಶ್ರೀ ಗುರು ಪಂಚಾಕ್ಷರಿ ಸಂಗೀತ ವಿದ್ಯಾಲಯ ದಾವಣಗೆರೆಯಲ್ಲಿ "ತಾಳ ಲಯ ಕಣ್ಮಣಿ" ಎಂಬ ಬಿರುದನ್ನು ನೀಡಿ ಗೌರವಿಸಲಾಯಿತು.

ಬಸವಗುರು ಕಾರುಣ್ಯ ಪ್ರಶಸ್ತಿ ತಬಲಾ ವಾದ್ಯ ಗಾರುಡಿಗ ಮುಂತಾದ ಅನೇಕ ಬಿರುದುಗಳನ್ನು ಹೊಂದಿದ್ದಾರೆ.

**ಯೋಗ್ಯ ಶಿಕ್ಷಕರಾಗಿ ಪಂಡಿತ ರಘುನಾಥ ನಾಕೋಡರವರು :**

ಒಬ್ಬ ಕಲಾವಿದನು ಶಿಷ್ಯರನ್ನು ಬೆಳೆಸುವುದರಿಂದಲೂ ಅವರ ವ್ಯಕ್ತಿತ್ವವು ಬೆಳೆಯುತ್ತದೆ. ಇದನ್ನು ವಿದ್ಯಾದಾನವೆಂತಲೂ ಹೇಳಬಹುದು. ಇದರಿಂದ ಸಂಗೀತವು ಪೀಳಿಗೆಯಿಂದ ಪೀಳಿಗೆಗೆ ಮುಂದುವರಿದುಕೊಂಡು ಹೋಗುತ್ತದೆ. ಇದನ್ನು ಪಾಲಿಸಿರುವ ಇವರು ಅಪಾರ ಶಿಷ್ಯ ಬಳಗವನ್ನು ಹೊಂದಿದ್ದು ಅದರಲ್ಲಿ ಪ್ರಮುಖರನ್ನು ಕೆಳಗೆ ಕಾಣಿಸಲಾಗಿದೆ.

ಶ್ರೀ. ವಿಶ್ವನಾಥ ನಾಕೋಡ, ಶ್ರೀ.ರಾಜೇಂದ್ರ ನಾಕೋಡ, ಶ್ರೀ. ರವಿ ಕಿರಣ ನಾಕೋಡ, ಶ್ರೀ.ರಾಘವೇಂದ್ರ ನಾಕೋಡ, ಶ್ರೀ. ಶ್ರೀಧರ ಮಾಂಡ್ರೆ, ಶ್ರೀ. ಚಂದ್ರಶೇಖರ ಬಡಿಗೇರ, ಶ್ರೀ. ರವಿ ಕೂಡ್ಲಿಗಿ, ಶ್ರೀ. ನಾರಾಯಣ ಪುರಾಣಿಕ, ಶ್ರೀ. ಅಲ್ಲಮ ಪ್ರಭು ಕಡಕೋಳ, ಶ್ರೀ.ಶಾಂತಲಿಂಗ ದೇಸಾಯಿ ಕಲ್ಲೂರ, ಶ್ರೀ. ವಿಠ್ಠಲ ಅವಧಾನಿ, ಶ್ರೀ.ಅನಂತ ಹೆಗಡೆ, ಶ್ರೀ. ಷಡಾಕ್ಷರಿ ಶೀಲವಂತರ, ಶ್ರೀ. ಗುರುರಾಜ ಆಚಾರ್ಯ, ಶ್ರೀ. ವಾದಿರಾಜ ದಂಡಾಪುರ .

## ೩. ಡಾ. ರಾಚಯ್ಯ ಹಿರೇಮಠ



ಡಾ. ರಾಚಯ್ಯ ಹಿರೇಮಠವರು ಬಾಲ್ಯದಲ್ಲಿಯೇ ತಬಲಾವನ್ನು ಕಲಿಯಬೇಕೆಂಬ ಆಶೆಯನ್ನು ಹೊಂದಿದ್ದರು. ಇವರು ೨-೦೫-೧೯೫೨ರಲ್ಲಿ ಧಾರವಾಡ ತಾಲೂಕ ಬೆನಕನಕಟ್ಟಿಯಲ್ಲಿ ಜನಿಸಿದರು. ಬಾಲ್ಯದಲ್ಲಿಯೇ ಚಿಕ್ಕಪ್ಪರಾದ ರುದ್ರಯ್ಯ ಹಿರೇಮಠ ಇವರಲ್ಲಿ ತಾಳವಾದ್ಯ ಅಭ್ಯಾಸ ಪ್ರಾರಂಭಿಸಿ ನಂತರ ಪಂಡಿತ ಬಸವರಾಜ ಬೆಂಡಿಗೇರಿಯವರಲ್ಲಿ ಹಾಗೂ ಶ್ರೀ ಮಮ್ಮುಲಾಲ ಸಾಯಗಾಂವಕರ ಇವರಲ್ಲಿ ಹದಿನೈದು ವರ್ಷ ತಬಲಾವನ್ನು ಕಲಿತರು.

ಡಾ. ರಾಚಯ್ಯ ಹಿರೇಮಠರವರು ಪಂಡಿತ ಬಸವರಾಜ ಬೆಂಡಿಗೇರಿಯವರ ಆಶೀರ್ವಾದದಿಂದ ತಬಲಾ ಕಲಿತು ಅನೇಕ ಹೆಸರಾಂತ ಕಲಾಕಾರರಿಗೆ ತಬಲಾ ಸಾಥನ್ನು ನೀಡಿದ್ದಾರೆ ಇದರಲ್ಲಿ ಪ್ರಮುಖರಾದವರೆಂದರೆ ಪಂ. ಮಲ್ಲಿಕಾರ್ಜುನ ಮನ್ಸೂರ, ಪಂ. ಬಸವರಾಜ ರಾಜಗುರು, ಪಂ. ಪಂಚಾಕ್ಷರಿ ಸ್ವಾಮಿ ಮತ್ತಿಗಟ್ಟಿ, ಶ್ರೀಮತಿ ಪದ್ಮಾವತಿ ಸಾಲಿಗ್ರಾಮ, ಶ್ರೀ.ಪ್ರಭುದೇವ ಸರದಾರ, ಡಾ. ಬಿಂದು ಮಾಧವ ಪಾಠಕ (ಬೀನ), ಪಂ. ಬಿಸ್ವಜೀತ ರಾಯ್ ಚೌದರಿ (ಸರೋದ), ಪಂ. ವ್ಹಿ. ಜಿ. ಜೋಗ (ವಾಯೋಲಿನ್), ಬಿ. ಎಸ್. ಮಠ (ವಾಯೋಲಿನ್), ಶ್ರೀ ಎಸ್. ಎಚ್. ತರ್ಲಗಟ್ಟಿ (ಸೀತಾರ). ಇವರು ೧೯೮೫ರಲ್ಲಿ ಆಕಾಶವಾಣಿಯ "ಬಿ ಹಾಯ್" ಕಲಾವಿದರಾದರು.

ಡಾ. ರಾಚಯ್ಯ ಹಿರೇಮಠರವರು ವಿದೇಶದಲ್ಲಿಯೂ ಕೂಡ ಕಾರ್ಯಕ್ರಮ ನೀಡಿದ್ದಾರೆ. ಅವು ಈ ರೀತಿ ಯಾಗಿವೆ

೧. ೧೯೮೫ ಜೂನದಲ್ಲಿ ಫ್ರಾನ್ಸದೇಶದಲ್ಲಿ ಶ್ರೀ. ಎಸ್. ಎಚ. ತರ್ಲಗಟ್ಟಿ (ಸೀತಾರ) ಯವರ ಜೊತೆಗೆ ತಬಲಾ ಸಾಥ ಕಾರ್ಯಕ್ರಮ ನೀಡಿದ್ದಾರೆ.

೨. ೧೯೯೪ರಲ್ಲಿ ಲಂಡನ್‌ದಲ್ಲಿ ಪಂ. ಪಂಚಾಕ್ಷರಿ ಸ್ವಾಮಿ ಮತ್ತಿಗಟ್ಟಿಯವರ ಗಾಯನದ ಜೊತೆಗೆ ಸಾಥ ಮಾಡಿರುವರು.

ಇದಲ್ಲದೆ ೧೯೯೫ರಲ್ಲಿ "ತಬಲಾ ಉತ್ಪತ್ತಿ ಹಾಗೂ ತಬಲಾ ಘರಾಣೆಗಳ ಒಂದು ಅಧ್ಯಯನ" ಕುರಿತು ಪಿಎಚ್.ಡಿ ಮಾಡಿದ್ದಾರೆ ಹಾಗೂ ತಬಲಾ ದೇಹಲಿಯಿಂದ ಪ್ರಸಾರವಾಗುವ ಮಂಗಳವಾರ ಸಂಗೀತ ಸಭೆಯಲ್ಲಿ ಕಾರ್ಯಕ್ರಮ ನೀಡಿದ್ದಾರೆ.

**ಪ್ರಸ್ತುತ ಪ್ರಕಟಣೆ:**

೧. ಸದ್ಯ ವಿದ್ವತ ಮೊದಲ ವರ್ಷದ ಪಠ್ಯ ಪುಸ್ತಕ ಸಮಿತಿಯ (ಕರ್ನಾಟಕ ಸರ್ಕಾರ) ಅಧ್ಯಕ್ಷರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ.

೨. ಬಿ.ಓ. ಎಸ್. ಸಮಿತಿ ಸದಸ್ಯತ್ವ ವಿಶ್ವವಿಧ್ಯಾಲಯ ಗುಲಬರ್ಗ

ಡಾ. ರಾಚಯ್ಯ ಹಿರೇಮಠರವರು ಇಗ ಸದ್ಯದಲ್ಲಿ ಕರ್ನಾಟಕ ಕಾಲೇಜ ಸಂಗೀತ ವಿಭಾಗ ಧಾರವಾಡದಲ್ಲಿ ತಬಲಾ ಉಪನ್ಯಾಸಕರಾಗಿ ಸೇವೆ ಸಲ್ಲಿಸುತ್ತಿದ್ದಾರೆ ಹಾಗೂ ಅನೇಕ ಶಿಷ್ಯವೃಂದವನ್ನು ಹೊಂದಿದ್ದು ಅವರು ಈ ರೀತಿಯಾಗಿದ್ದಾರೆ. ಶ್ರೀ. ಅಲ್ಲಮ ಪ್ರಭು ಕಡಕೋಳ ಶ್ರೀ ರಾಜಕುಮಾರ ಐಯ್ಯರ, ಶ್ರೀ ಕುಮಾರ ಮರಡೂರ, ಶ್ರೀ ಅನೀಲ ಮೈತ್ರಿ, ಶ್ರೀ ಬೈಜು, ಶ್ರೀ ಸೃಜನ ಕುಲಕರ್ಣಿ, ಕುಮಾರಿ ರೇಖಾ ಪಾಟೀಲ, ಶ್ರೀ ಗೋಪಾಲ ಕೃಷ್ಣ ಮುಂತಾದವರು.

## ೪. ಶ್ರೀ. ಶ್ರೀಶೈಲ ಬಳ್ಳೂರ



ಇವರು ಜನಿಸಿದ್ದು ದಿನಾಂದ ೪.೫.೧೯೪೯. ಇವರು ಕಲಿತದ್ದು ಬಿ. ಎಸ್.ಸಿ ಪದವಿ (೧೯೭೧). ಆದರೂ ಚಿಕ್ಕಂದಿರಿರುವಾಗಲೇ ಇವರಿಗೆ ತಬಲಾ ವಾದನ ಕಲೆಯಲ್ಲಿ ಆಸಕ್ತಿ. ಕಾಲೇಜ ಅಭ್ಯಾಸ ಮುಗಿದ ನಂತರ ತಬಲಾ ವಾದನದಲ್ಲಿ ಹೆಚ್ಚು ಅಭ್ಯಾಸ ಮಾಡಿದ ಪರಿಶ್ರಮದ ಫಲವಾಗಿ ೧೯೭೨ ರಲ್ಲಿ ಸೀನಿಯರ್ ಪರೀಕ್ಷೆಯಲ್ಲಿ ಮೊದಲನೆ ಸ್ಥಾನ ಪಡೆದು ಉತ್ತೀರ್ಣರಾದರು. ಮುಂದೆ ೧೯೭೮ ರಲ್ಲಿ ವಿದ್ವತ್ ಪರೀಕ್ಷೆಯಲ್ಲಿ ಎರಡನೇ ಸ್ಥಾನ ಪಡೆದರು. ೧೯೭೯ ರಲ್ಲಿ ಸಂಗೀತ ಅಲಂಕಾರ ಸಹಿತ ಪೂರ್ಣಗೊಳಿಸಿದರು.

ಈಗ ಇವರು ಬಾಗಲಕೋಟೆಯ ಬಸವೇಶ್ವರ ಕಲಾ ಮಹಾವಿದ್ಯಾಲಯದ ಸಂಗೀತ ವಿಭಾಗದಲ್ಲಿ ಮುಖ್ಯಸ್ಥರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ. ಇವರ ಶಿಷ್ಯವೃಂದದಲ್ಲಿ ಶ್ರೀ ಕಿರಣ ಕುಮಾರ ಎರಪಲ್ ಹಾಗೂ ರೇವಣ ಸಿದ್ಧ ಬೆನ್ನೂರ ಮುಖ್ಯರು.

# ೫. ಶ್ರೀ ಫಯಾಜ ಖಾನ



ಶ್ರೀ ಫಯಾಜ ಖಾನರ ಜನನವು ಜ. ೧೭-೨-೧೯೬೮ ಧಾರವಾಡದಲ್ಲಿ ಆಯಿತು. ಇವರ ತಂದೆ ಉಸ್ತಾದ ಅಬ್ದುಲ್ ಖಾದರ ಒಳ್ಳೆಯ ಸಾರಂಗಿವಾದಕರು. ಹೀಗಾಗಿ ಮನೆಯಲ್ಲಿ ಸಂಗೀತದ ವಾತಾವರಣ ಇದ್ದ ಕಾರಣ ಶ್ರೀ ಫಯಾಜ್ ಖಾನರು ಮೊಟ್ಟ ಮೊದಲು ಎಂಟನೆಯ ವಯಸ್ಸಿನಲ್ಲಿ ಪಂ. ಬಸವರಾಜ ಬೆಂಡಿಗೇರಿಯವರ ಹತ್ತಿರ ತಬಲಾ ಶಿಕ್ಷಣ ಪ್ರಾರಂಭಮಾಡಿದರು ಹತ್ತು ವರ್ಷದ ತನಕ ತಬಲಾ ಅಭ್ಯಾಸ ಮಾಡಿ ಸಾಕಷ್ಟು ತಬಲಾ ಜ್ಞಾನವನ್ನು ಪಂಡಿತ ಬಸವರಾಜ ಬೆಂಡಿಗೇರಿಯವರಿಂದ ಮಾಡಿಕೊಂಡರು.

ಶ್ರೀ ಫಯಾಜ ಖಾನರು, ಗಾಯನ ಸಮಾಜ ದೇವಲ್ ಕ್ಲಬ್‌ನವರು ೧೯೮೦ ರಲ್ಲಿ ಆಯೋಜಿಸಿದ ತಬಲಾ ಸ್ಪರ್ಧೆಯಲ್ಲಿ ಸತತವಾಗಿ ಮೂರು ವರ್ಷ ಪ್ರಥಮ ಸ್ಥಾನವನ್ನು ಪಡೆದಿದ್ದಾರೆ. ನಂತರ ಮನೆಯ ವಿದ್ಯೆಯಾದ ಸಾರಂಗಿಯನ್ನು ತಮ್ಮ ತಂದೆಯವರಾದ ಉಸ್ತಾದ ಅಬ್ದುಲ್ ಖಾದರ ಇವರಲ್ಲಿ ಮುಂದುವರಿಸಿದರು. ಈಗ ಸಧ್ಯಕ್ಕೆ ಇವರು ಆಕಾಶವಾಣಿ ಹಾಗೂ ದೂರದರ್ಶನಗಳಲ್ಲಿ ತಮ್ಮ ಸಂಗೀತ ಹಾಗೂ ಸಾರಂಗಿಯ ಕಾರ್ಯಕ್ರಮಗಳನ್ನು ನೀಡುತ್ತಿದ್ದಾರೆ.

# ೬. ಶ್ರೀ. ನಂದಿಕೇಶ್ವರ ಗುರವ



ಶ್ರೀ ನಂದಿಕೇಶ್ವರ ಗುರವ ಅವರು ಕರ್ನಾಟಕದ ಸುಪ್ರಸಿದ್ಧ ತಬಲಾ ಕಲಾವಿದರಲ್ಲಿ ಒಬ್ಬರಾಗಿದ್ದಾರೆ. ಅವರು ೨೦-೦೨-೧೯೬೦ರಲ್ಲಿ ಕೊಲ್ಹಾಪುರದಲ್ಲಿ ಜನಿಸಿದರು. ಕರ್ನಾಟಕವನ್ನು ತಮ್ಮ ಕರ್ಮಭೂಮಿಯನ್ನಾಗಿಸಿಕೊಂಡಿದ್ದಾರೆ. ಕಲೆ, ಸಾಹಿತ್ಯ, ಸಂಸ್ಕೃತಿಗಳ ತವರೂರಾದ ಧಾರವಾಡದಲ್ಲಿ ನೆಲೆಸಿರುವ ಅವರು ಸದ್ಯಕ್ಕೆ ಕರ್ನಾಟಕ ವಿಶ್ವವಿದ್ಯಾಲಯದ ಸಂಗೀತ ಸ್ನಾತಕೋತ್ತರ ವಿಭಾಗದಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ.

ಶ್ರೀ ನಂದಿಕೇಶ್ವರ ಗುರವ ಅವರದು ಸಂಗೀತ ಮನೆತನದಲ್ಲಿ ಜನನ. ತಂದೆ, ಪಂಡಿತ ಸಂಗಮೇಶ್ವರ ಗುರವ ಅವರು ಕಿರಾಣಾ ಘರಾಣಾದ ಶ್ರೇಷ್ಠ ಸಂಗೀತಗಾರರು, ಅಜ್ಜ ಶ್ರೀ ಗಣಪತರಾವ ಗುರುವ ಅವರು ಸಹ ಸುಪ್ರಸಿದ್ಧ ಸಂಗೀತಗಾರರಾಗಿದ್ದರು. ಇವರಲ್ಲಿ ದೈವದತ್ತವಾದ ಸಂಗೀತದ ಸಂಸ್ಕಾರಗಳು ಬಾಲ್ಯದಿಂದಲೇ ಬೆಳೆದು ಬಂದಿವೆ.

ಶ್ರೀ ನಂದಿಕೇಶ್ವರ ಗುರವ ಅವರು ತಮ್ಮ ಪ್ರಾರಂಭಿಕ ತಬಲಾ ಶಿಕ್ಷಣವನ್ನು ಅಜ್ಜ ಶ್ರೀ.ಗಣಪತರಾವ ಗುರವ ಅವರ ಬಳಿಯಲ್ಲಿ ಹಾಗೂ ಶ್ರೀ ಅಪ್ಪಾಸಾಹೇಬ ವಂಟಮುರಿ ಅವರ ಬಳಿಯಲ್ಲಿಯೂ ಪಡೆದರು. ನಂತರ ಸುಪ್ರಸಿದ್ಧ ತಬಲಾ ವಾದಕರಾದ ಶ್ರೀ ಗಿರೀಶ ಆವಟೆ ಹಾಗೂ ರಾಷ್ಟ್ರಮಟ್ಟದ ತಬಲಾ ಕಲಾವಿದರಾದ ಪಂ. ಬಸವರಾಜ ಬೆಂಡಿಗೇರಿ ಅವರ ಬಳಿಯಲ್ಲಿಯೂ ಅತ್ಯಂತ ಕಠಿಣ ಪರಿಶ್ರಮದಿಂದ ಸಾಧನೆ ಗೈದು ತಬಲಾವಾದನದಲ್ಲಿ ಪ್ರಭುತ್ವವನ್ನು ಹೊಂದಿದ್ದಾರೆ. ಈಗ, ಪಂಡಿತ ರಘುನಾಥ ನಾಕೋಡ ಅವರ ಮಾರ್ಗದರ್ಶನದಲ್ಲಿ ಹೆಚ್ಚಿನ ವ್ಯಾಸಂಗವನ್ನು ಮುಂದುವರೆಸಿದ್ದಾರೆ.

ದಾಯಾ ಮತ್ತು ಬಾಯಾದ ದಮ್ದಾರ್ ಠೇಕಾದ ಪ್ರತಿಯೊಂದು ಶಬ್ದವನ್ನು ಅತ್ಯಂತ ಸ್ಪಷ್ಟವಾಗಿ ಅಭಿವ್ಯಕ್ತಪಡಿಸಿ ಜನರ ಪ್ರಶಂಸೆಗೆ ಪಾತ್ರರಾಗಿದ್ದಾರೆ. ಈ ರೀತಿಯಾದ ಶ್ರೀ.ನಂದಿಕೇಶ್ವರರ ಪರಿಣತಿ ಮೆಚ್ಚುವಂತಹದ್ದು ಹಾಗೂ ಅಭಿನಂದನೀಯವಾದುದು. ಶ್ರೀ.ನಂದಿಕೇಶ್ವರ ಅವರು ಆಕಾಶವಾಣಿಯ "ಬಿ-ಹೈ" ಶ್ರೇಣಿಯ ಕಲಾವಿದರಾಗಿದ್ದು ಆಕಾಶವಾಣಿ ಮತ್ತು ದೂರದರ್ಶನದಲ್ಲಿ ಹಲವಾರು ಕಾರ್ಯಕ್ರಮಗಳನ್ನು ನೀಡಿದ್ದಾರೆ.

ಶ್ರೀ.ನಂದಿಕೇಶ್ವರ ಗುರವ ಅವರು ರಾಷ್ಟ್ರಮಟ್ಟದ ಸರ್ವಶ್ರೇಷ್ಠ ಗಾಯಕರೆನಿಸಿದ ಪದ್ಮವಿಭೂಷಣ ಪಂ. ಡಾ. ಮಲ್ಲಿಕಾರ್ಜುನ ಮನ್ಸೂರ, ಪದ್ಮಶ್ರೀ. ಪಂ. ಬಸವರಾಜ ರಾಜಗುರು, ಪಂಡಿತ ಕೆ.ಜಿ. ಗಿಂಡೆ ಮುಂತಾದವರಿಗೆ ತಬಲಾ ಸಾಥ ನೀಡಿದ ಕೀರ್ತಿಗೆ ಭಾಜನರಾಗಿದ್ದಾರೆ. ಇಷ್ಟೇ ಅಲ್ಲದೇ ಅವರು ಅನೇಕ ಕಡೆಗಳಲ್ಲಿ ಸ್ವತಂತ್ರ ತಬಲಾ ಸೋಲೋ ಕಾರ್ಯಕ್ರಮಗಳನ್ನು ಕೊಟ್ಟು ಜನರ ಮೆಚ್ಚುಗೆಯನ್ನು ಗಳಿಸಿದ್ದಾರೆ.

## ೭. ಶ್ರೀ ಸುಧೀಂದ್ರ ಮುಜುಂದಾರ :



ಗ್ವಾಲಿಯರ ಘರಾಣೆಯ ಸುಪ್ರಸಿದ್ಧ ಗಾಯಕರಾದ ಪಂ. ನಾರಾಯಣರಾವ್ ಮಜುಂದಾರ ಇವರ ಸುಪುತ್ರ. ಸುಧೀಂದ್ರ ಮುಜುಂದಾರ ಇವರು ೬-೯-೧೯೫೪ ರಲ್ಲಿ ಧಾರವಾಡದಲ್ಲಿ ಜನಿಸಿದರು.

ತಮ್ಮ ಪ್ರಾರಂಭಿಕ ತಬಲಾ ಶಿಕ್ಷಣವನ್ನು ತಂದೆಯವರಲ್ಲಿ, ನಂತರ ಪಂಡಿತ ಗಿರೀಶ. ಆವಟೆಯವರಲ್ಲಿ ಪಡೆದರು. ಉಚ್ಚ ಶಿಕ್ಷಣವನ್ನು ಪಂಡಿತ ಬಸವರಾಜ ಬೆಂಡಿಗೇರಿಯವರಲ್ಲಿ ಪಡೆದರು.

ಇವರಿಗೆ ಶೈಕ್ಷಣಿಕ ರಂಗದಲ್ಲಿಯೂ ಪರಿಶ್ರಮ ಉಂಟು. ಇವರು ಎಮ್. ಎ. (ರಾಜ್ಯಶಾಸ್ತ್ರ), ಎಂ. ಎ. (ಹಿಂದಿ),ಸ್ನಾತಕೋತ್ತರ ಪಧವಿಧರರು ೧೯೮೬ರಲ್ಲಿ ತಬಲಾದಲ್ಲಿ ಅಲಂಕಾರ ಪದವಿ ಪಡೆದಿದ್ದಾರೆ. ತಬಲಾ ವಿದ್ವತ್ ಪರೀಕ್ಷೆಯಲ್ಲಿ ರಾಜ್ಯಕ್ಕೆ ಪ್ರಥಮ ಸ್ಥಾನ ೧೯೮೧ ಪಡೆದಿದ್ದಾರೆ.

ಪಂ. ವಿನಾಯಕ ತೊರವಿ, ಪಂ. ಬಿಂದು ಮಾಧವ ಪಾಠಕ, ಶ್ರೀ.ಎಂ. ವೆಂಕಟೇಶಕುಮಾರ, ಪಂ. ಪಂಚಾಕ್ಷರಿಸ್ವಾಮಿ ಮತ್ತಿಗಟ್ಟಿ ಇನ್ನೂ ಅನೇಕ ಗಾಯಕ, ವಾದಕರಿಗೆ ಸಮರ್ಥ ಸಾಥ ನೀಡಿದ ಹೆಗ್ಗಳಿಕೆ ಇವರದಾಗಿದೆ.

ಸಧ್ಯ ಇವರು ಕರ್ನಾಟಕ ವಿಶ್ವವಿದ್ಯಾಲಯದ ಸ್ನಾತಕೋತ್ತರ ಸಂಗೀತ ವಿಭಾಗದಲ್ಲಿ ತಬಲಾ ಕಲಾವಿದರಾಗಿ ಸೇವೆ ಸಲ್ಲಿಸುತ್ತಿದ್ದಾರೆ.

## ೮. ಶ್ರೀ. ನಿಸಾರ ಅಹಮದ :



ಶ್ರೀ ನಿಸಾರ ಅಹಮದ ಇವರೂ ಪಂಡಿತ ಬಸವರಾಜ ಬೆಂಡಿಗೇರಿಯವರ ಶಿಷ್ಯರಾಗಿದ್ದು ಬಾಲ್ಯದಿಂದಲೂ ತಬಲಾ ವಾದನ ಕಲೆಯಲ್ಲಿ ಅಭಿರುಚಿ ಬೆಳೆಸಿಕೊಂಡು ಬಂದವರು. ಮೊದಮೊದಲು ಪಂಡಿತ ಎ. ಆರ್. ಗುರವಜಿಯವರಲ್ಲಿ ತಬಲಾ ಶಿಕ್ಷಣ ಪಡೆದು ನಂತರ ದಾಂಡೇಲಿಯಲ್ಲಿ ಉಸ್ತಾದ ಕೆ. ಎಲ್. ಜಮಾದಾರವರ ಹತ್ತಿರ ದಿಲ್ಲಿ ಘುರಾಣೆಯ ಪದ್ಧತಿಯಲ್ಲಿ ನೈಪುಣ್ಯ ಸಾಧಿಸಿದರು. ೧೯೯೩ ರಲ್ಲಿ ಸುದೈವದಿಂದ ಇವರಿಗೆ ಉಸ್ತಾದ ಬಾಲೇಖಾನರ ಪರಿಚಯವಾಗಿ ಧಾರವಾಡಕ್ಕೆ ಬಂದರು ಮತ್ತು ಅವರ ಸಲಹೆಯ ಮೇರೆಗೆ ಪಂಡಿತ ಬಸವರಾಜ ಬೆಂಡಿಗೇರಿಯವರಲ್ಲಿ ಪೂರಬ್ ಘರಾಣೆಯ ಆಳವಾದ ಅಭ್ಯಾಸ ಮಾಡಿದರು.

ಸಂಗೀತ ವಿದ್ವಾನರಾದ ಪಂಡಿತ ಅರ್ಜುನಸಾ ನಾಕೋಡ, ಪಂಡಿತ ಪಂಚಾಕ್ಷರಿ ಸ್ವಾಮಿ ಮತ್ತಿಗಟ್ಟಿ ಪಂಡಿತ ರಾಜಶೇಖರ ಮನ್ಸೂರ, ಪಂಡಿತ ವಿನಾಯಕ ತೊರವಿ, ಪಂಡಿತ ಪರಮೇಶ್ವರ ಹೆಗಡೆ, ಪಂಡಿತ ವೆಂಕಟೇಶ ಕುಮಾರ ಹಾಗೂ ವಾದ್ಯಕಲಾನಿಪುಣರಾದ ಉಸ್ತಾದ ಬಾಲೇಖಾನ (ಸಿತಾರ), ಮುಂಬೈಯ ಉಸ್ತಾದ ಇರ್ಷದಖಾನ ಕಲಕತ್ತೆಯ ಶ್ರೀ. ಸಂದೀಪನ ಸಮಾಜಪತಿ ಮುಂತಾವರಿಗೆ ಸಾಥ ನೀಡಿದ ಖ್ಯಾತಿ ಇವರದಾಗಿದೆ. ಇವರು ಆಕಾಶವಾಣಿ ಹಾಗೂ ದೂರದರ್ಶನ ಕಲಾವಿದರೂ ಆಗಿದ್ದಾರೆ.

# ೯. ಶ್ರೀ. ಶಶಿಭೂಷಣ ಗುರ್ಜರ



ಶ್ರೀ ಶಶಿಭೂಷಣ ವಿ. ಗುರ್ಜರ ಒರ್ವ ನುರಿತ ತಬಲಾ ವಾದನ ಕಲಾಕಾರ. ಇಲ್ಲಿಯ ವರೆಗೆ ಸಾಕಷ್ಟು ತಬಲಾ ಕಾರ್ಯಕ್ರಮಗಳನ್ನು ನೀಡಿ ಖ್ಯಾತರಾದವರು. ಉತ್ತರ ಕರ್ನಾಟಕದ ಇವರು ಈಗ ಬೆಂಗಳೂರಿನ ಯಶವಂತಪುರದಲ್ಲಿ ವಾಸವಾಗಿದ್ದಾರೆ. ೨೬ ವಯಸ್ಸಿನ ಉತ್ಸಾಹಿ ಯುವಕ ಇವರು ತಮ್ಮ ತಬಲಾ ಶಿಕ್ಷಣವನ್ನು ರಮೇಶ ಜೋಶಿ, ಪ್ರೊ. ಸಂಜೀವ ಪೋತದಾರ ಹಾಗೂ ಖ್ಯಾತ ಪಂಡಿತ ಬಸವರಾಜ ಬೆಂಡಿಗೇರಿಯವರಲ್ಲಿ ಪಡೆದವರು.

ಮೈಸೂರ ದಸರಾ, ಹಂಪಿ ವಿಜಯನಗರ ಉತ್ಸವ , ನವರಸಪುರ ಉತ್ಸವ , ಕರಾವಳಿ ಉತ್ಸವ ಕುಂದಗೋಳದ ಸವಾಯಿ ಗಂಧರ್ವ ಪುಣ್ಯತಿಥಿ, ಬನವಾಸಿಯ ಕದಂಬ ಉತ್ಸವ, ಹೀಗೆ ಹಲವಾರು ಜನಪ್ರಿಯ ಕಾರ್ಯಕ್ರಮಗಳಲ್ಲಿ ಇವರು ತಮ್ಮ ಕಲಾ ಪ್ರದರ್ಶನ ಮಾಡಿದ್ದು, ಹೆಸರಾಂತ ಸಂಗೀತಕಾರ ಡಾ,ಮಲ್ಲಿಕಾರ್ಜುನ ಮನಸೂರ, ಪಂಡಿತ. ಬಸವರಾಜ ರಾಜಗುರು, ಡಾ.ಗಂಗೂಬಾಯಿ ಹಾನಗಲ್, ಪಂಡಿತ ಪಂಚಾಕ್ಷರಿ ಸ್ವಾಮಿ ಮತ್ತಿಗಟ್ಟಿ, ಪಂಡಿತ. ನಾರಾಯಣರಾವ ಮುಜುಂದಾರ, ಪಂ. ಚಂದ್ರಶೇಖರ ಪುರಾಣಿಕಮಠ, ಪಂ.ಶೇಷಾದ್ರಿಗವಾಯಿ, ಮುಂತಾದವರು ಹಾಗೂ ವಾದನ ಕಲಾಕಾರ ಪಂ.ಟಿ.ವಿ. ಕಬಾಡಿ, ಡಾ. ಬಿಂದುಮಾಧವ ಪಾಠಕರವರಿಗೂ ಸಾಥ ನೀಡಿದ್ದಾರೆ. ಇವರು ಆಕಾಶವಾಣಿವಾಣಿಯ ಕಲಾವಿದರೂ ಆಗಿದ್ದಾರೆ.

ಹೀಗೆ ಅಸಂಖ್ಯ ಶಿಷ್ಯರನ್ನು ತಬಲಾ ವಾದನ ಕಲಾವಿದರನ್ನಾಗಿ ಮಾಡಿ ತಬಲಾ

ಪರಂಪರೆಯನ್ನು ಊರ್ಜಿತಗೊಳಿಸಿದ ಶ್ರೇಯಸ್ಸು ಪಂಡಿತ ಬಸವರಾಜ ಬೆಂಡಿಗೇರಿಯವರಿಗೆ ಸಲ್ಲುತ್ತದೆ. ಇವರ ಶಿಷ್ಯಂದಿರಲ್ಲಿ ಸಾಕಷ್ಟು ಜನರು ಆಕಾಶವಾಣಿಯ ಮೇಲಿನ ಶ್ರೇಣಿಗಳ ಕಲಾಕಾರರೆಂದು ಮನ್ನಣೆ ಹೊಂದಿದ್ದಾರೆ. ಕೆಲವರಂತೂ ತಬಲಾ ವಾದನ ಕಲಾ ನಿಪುಣತೆಯನ್ನು ತಮ್ಮ ಕಾರ್ಯಕ್ರಮಗಳ ಮೂಲಕ ದೇಶಾದ್ಯಂತ ಪರಿಚಯಗೊಳಿಸಿದ್ದಾರೆ. ಇಂತಹ ಮಹತ್ಸಾದನೆ ಪ್ರತೀಕವಾಗಿ ಸರಳ ಹಾಗೂ ಸಾದಾ ಜೀವನ ನಡೆಸಿ ಯಾವ ಫಲಾಪೇಕ್ಷೆ ಇಲ್ಲದೇ ಕಲಾ ಸೇವೆಗೆ ತಮ್ಮನ್ನು ಅರ್ಪಿಸಿ ಕೊಂಡು ಕೀರ್ತಿಶೇಷರಾದವರು ಪಂಡಿತ ಬಸವರಾಜ ಬೆಂಡಿಗೇರಿಯವರು. ಇಂತಹ ಸಂತೃಪ್ತ ಜೀವನ ನಡೆಸಿ ೧೨-೮-೧೯೯೯ರಂದು ಇಹಲೋಕ ಯಾತ್ರೆ ಮುಗಿಸಿದರು.

ಅಧ್ಯಾಯ - ೯

# ಪಂಡಿತ ಬಸವರಾಜ ಬೆಂಡಿಗೇರಿಯವರನ್ನು ಕುರಿತು ಹಿರಿಯ ಕಲಾವಿದರ ಅಭಿಪ್ರಾಯಗಳು

ಅಧ್ಯಾಯ-೯

# ಪಂಡಿತ ಬಸವರಾಜ ಬೆಂಡಿಗೇರಿಯವರ ಕುರಿತು ಹಿರಿಯ ಕಲಾವಿದರ ಅಭಿಪ್ರಾಯಗಳು

## ಸಂದರ್ಶನಗಳು :

### ೧. ಪದ್ಮವಿಭೂಷಣ ಡಾ.ಗಂಗೂಬಾಯಿ ಹಾನಗಲ್ (ಗಾಯಕರು):

ಗಂಗೂಬಾಯಿಯವರು : ಬೆಂಡಿಗೇರಿಯವರದು ನನಗೆ ಗುರ್ತಾದದ್ದು ಬಾಂಬೆದಾಗ ಕುಮಾರನ ಸಂಗತಿಯಲ್ಲಿ ಇದ್ದರವರು ಮತ್ತೆ ದೇವಧರನಲ್ಲಿ ಇವರು ಇರತಿದ್ರು. ಆವಾಗ ಬೆಂಡಿಗೇರಿಯವರೇನ ಬಾರಸತಾರ ಅಂತ ನನಗೆ ಹೀಂಗ ಸಮಜೂತಾಗಿತ್ತು. ಆವಾಗ ಕುಮಾರನ ಲಗ್ನದಾಗ ನಾ ಹಾಡಿದೆ. ಆವತ್ತ ಬೆಂಡಿಗೇರೀನ ನನ್ನ ಸಂಗತಿ ಬಾರಸಿದ್ರು. ಅವತ್ನಿಂದ ನನಗೆ ಬೆಂಡಿಗೇರಿ ಅಂದರ ಒಂದ ದೊಡ್ಡ ವ್ಯಕ್ತಿ ಅದಽಪಾ ಅನಿಸ್ತು. ಹಿಂದಗಡೆ ಇಲ್ಲಿ ಬಂದ ಮ್ಯಾಲನೂ ಮತ್ತ ಅಲ್ಲೆ ಒಂದೆರಡಸರೆ ನನ್ನ ಸಂಗತಿ ಬಾರಸ್ಯಾರ ಬಾಂಬೆದಾಗ.

ಸಂದರ್ಶಕ : ಮತ್ತ ಗಜಾನನ ಬುವಾ ಅವರ ಕಡೆ ಬಾರಸ್ತಿದ್ರೆನ್ರಿ ಮೊದಲೆಲ್ಲಾ ?

ಗಂಗೂಬಾಯಿಯವರು : ಅವರಗೆಲ್ಲಾ ಬಾರಸ್ಯಾರವರು-ದೊಡ್ಡವರ ಸಂಗತಿ. ಅಂದರ ದೇವಧರವ್ರ ಕಡೆ ಏನೇನ ಬರತಿದ್ರು ಅವರ ಕಡೆ ಎಲ್ಲಾ ಇವರು ಬಾರಸವರು. ವರ್ಷಾದಿಗಂಬರುತ್ಸವ ಆಗ್ತಿತ್ತಲ್ಲ. ಗಂಧರ್ವ ಮಹಾವಿದ್ಯಾಲಯದ್ದು. ಅವರದಿದ್ದಾಗ ಎರಡೆರಡ ದಿವಸ ಮಾಡ್ತಿದ್ರು. ಆದರೆ ಕ್ಲಾಸನ್ಯಾಗ ನಡೆತಿದ್ವಲ್ಲೇ ಆವಾಗಽ. ಆವಾಗ ಹಾಲ್ ಹಿಡ್ಯೂದು ಅದು ಏನಾಗ್ತಿದ್ದಿಲ್ಲ. ದೇವಧರ ಕ್ಲಾಸನ್ಯಾಗ ನಡಿತಿದ್ವು.

ಸಂದರ್ಶಕ : ಅಂದರೆ ಬಾಂಬೆ ಬಿಟ್ಟ ಈ ಕಡೆ ಧಾರವಾಡಕ್ಕೆ ಬಂದು ಈ ಕರ್ನಾಟಕ ಕಾಲೇಜನ್ಯಾಗ ಇದ್ದರೇನ್ರಿ?

ಗಂಗೂಬಾಯಿ : ಇಲ್ಲೇ ಕರ್ನಾಟಕ ಕಾಲೇಜನ್ಯಾಗ ಇದ್ರು ನೌಕರಿ ಹಿಡಕೊಂಡ.

ಸಂದರ್ಶಕ :ಓಹೋ ಇಲ್ಲೇ ನೌಕರಿ ಆತೇನ್ರಿ, ಮನಸೂರವರ ಕಡೆ ಅವರ ಬಾರಸ್ಯಾರ ಏನ್ರಿ?

ಗಂಗೂಬಾಯಿಯವರು : ಮನಸೂರವರ ಕಡೆ ಅವರ ಭಾಳ ಬಾರಸ್ಯಾರ.

ಸಂದರ್ಶಕ : ಸಾಥ-ಸಂಗತ ಹ್ಯಾಂಗಿತ್ರಿ ಅವರದು.

ಗಂಗೂಬಾಯಿಯವರು : ಸಾಥ ಸಂಗತ ಛಲೊ ಇತ್ತು.

ನಾ ಎರಡನೂ ಕೇಳೇನವಾಗ-ಅಂದರೆ ಇನ್ಸ್ಟ್ರುಮೆಂಟಗಳ ಸಂಗತಿನೂ ಕೇಳೇನಿ ನಮ್ಮ

ಹಾಡಿನವರ ಸಂಗತಿ ಆಂತೂ ನಮ್ಮೆಲ್ಲರ ಸಂಗತೀನೂ ಬಾರಸ್ಯಾರ.

ಸಂದರ್ಶಕ : ಅವರ ಗುರುಗಳದೇನರ ಗುರ್ತದೇನ್ರಿ. ಬೆಂಡಿಗೇರಿ ಗುರಗಳದು.

ಗಂಗೂಬಾಯಿಯವರು : ಇಲ್ಲಾ ಇಲ್ಲಾ ಗುರುತಿಲ್ಲಾ. ಯಾರ ಹೆಸರ ಹೇಳತಿದ್ರು ನನಗೆ ನೆನಪ ಉಳಿದಿಲ್ಲದು. ಅಂದರ ದೇವಧರ ಕಡೆ ಮಂದಿ ಬರಬೇಕಲ್ಲ ಹೀಗಾಗಿ ಅವರ ಕಡೆ ಬಂದವರ ಕಡೆಂದೆಲ್ಲ ಇವರು ಮಾಹಿತಿ ತೋಗೋತಿದ್ರು. ದೇವಧರನಲ್ಲೆ ಕೇಳಲಿಕ್ಕೂ ಸಿಗತಿತ್ತು ಬರತಿದ್ರು, ಅವರಿಗೆ ಯಾರರ ಹೇಳಂದರ ಸಾಕ, ಸ್ವಲ್ಪ ಹೇಳಿ ಹೋಗತಿದ್ರು ಒಂದೆರಡು ಅವರಿಗೆ ಏನಾರ ಕಲಿಸಿ ಹೋಗತಿದ್ರು ದೇವಧರ ಕಡೆ ಭಾಳ ಇತ್ತವರದು. ದೇವಧರ ಕಡೆ ನಾ ಸುಧಾ ಹಾಡೇನಿ, ಕುಮಾರನ ಲಗ್ನದಾಗ ಕುಮಾರ ಇದರಾಗಿದ್ದ ನಾವೊಂದು ಖೋಲಿ ಹಿಡಿದಿದ್ವಿ. ತಿಂಗಳಿಗೆ ಎರಡು ಪ್ರೊಗ್ರಾಮ ರೇಡಿಯೊದ್ದು ಸಿಗತಿದ್ವು ೧೫ ದಿವಸಕ್ಕೊಂದು ಆವಾಗ ನನಗೆ ಎರಡು ಗುರುಗಳಿಗೆ ಎರಡು. ಮುಂಬೈದಾಗ ಒಂದು ಖೋಲಿ ಹಿಡಿದಿದ್ವಿ ನಾವು ೧೩ ರೂಪಾಯ್ಕ ಅಲ್ಲಿ ಮೂರನೇ ಮಜಲ ಮ್ಯಾಲೆ ಇವ ದೇವಧರ ಕುಮಾರ ಇರತಿದ್ದ. ಕುಮಾರ ಇರೂ ಮುಂದೆ ನಾವು ಹೋದ ಕೂಡಲೆ ಅವನ್ನ ನಾವ sಗತಿ. ಅಲ್ಲಿ ಮಾತಾಡಕೊಂಥ ಕೂಡಬೇಕು. ನಮ್ಮ ಸಂಗತಿ. ನಮ್ಮ ಮಾಮಾ, ಅವ. ಪಾಚ ತೀನ ದೋನ ಆಡಬೇಕು. ಇವಾ ಗೆದ್ದಾ ಅಂದ ಕೂಡ್ಲೆ ಒದರ ಬೇಕು. ಬಾಜೂದವರ ಬಂದು ಸುಮ್ನ. ಇಲ್ಲಾ ಭಾಳ ಇತ್ತು ಆವಾಗಿನ ತುಟ್ಟು ಅವಗ ನಮಗೂ ಹಿಂದಾಗಡೆ ಬೆಂಡಿಗೇರಿ ಬಂದರು. ದೇವಧರ ಬಿಟ್ಟು ಅಪೆರಾ 'ಹೌಸ' ಕಡೆ ಅಲ್ಲಿ ವಾಸ ಮಾಡಿದ್ರವರು. ಹಿಂದಗಡೆ ಹೋಗೊದು ಬರೊದು ತಪ್ಪಿತು. ಅಲ್ಲಿದ್ದಾಗ ನಾವ ಇರತಿದ್ವಿ ಇವನೂ ಬರತಿದ್ದ ಹೀಗಾಗಿ ಭಾಳ ಇತ್ತು.

## ೨. ಪಂ ರಾಮಭಾವು ಬಿಜಾಪುರೆ (ಹಾರ್ಮೋನಿಯಂ ಕಲಾವಿದರು) :

ರಾಮಭಾವು ಅವರು :- ಬೆಂಡಿಗೇರಯವರದು ನಮ್ಮದೂ ಗುರುತಂತಂದ್ರ ಮೆಹಬೂಬಖಾನ ಸಾಹೇಬ ಅಂತ ದೊಡ್ಡ ತಬಲಜಿ ಇದ್ರು . ಅವರ ಕಡೆ ತಬಲಾ ಕಲಿಲಿಕ್ಕೆ ಹೋಗಿ ಒಂದ ತಿಂಗಳ ಆಗಿರಬೇಕು ನಾ ಎನ ಮಾಡಿದೇನೆಂದರೆ ನಾ ಪೆಟಿಗೆ ಛಲೊ ಬಾರಸತಿದ್ದ ಕಾರಣ ಬಲಗೈಲೆ ತಬಲಾ ಬಾರಸೂ ಇಚ್ಛಾ ನನಗ ಇದ್ದಿಲ್ಲ. ನಾ ತಬಲಾ ಎಡಗೈಯಾಗ ಹಿಡ್ಯಾಕ ಹತ್ತಿದೆ. ಹಂಗ ಇಡಕೊಂಡ ಕೂತೆ ನಾನು ಕೂತ ಕೂಡಲೆ ಮೆಹಬೂಬ ಸಾಬ್ರು ಎನೆಂದರು ''ಕಾಯ ದಾಯಾ ಹೈಚ ಕಾರೆ ತು'' ಎಡಗೈಯಾಕ ತಬಲಾ ಬಾರಸತೀ ಬಲಗೈ ಬೇಕ ತಬಲಾಕ. ಇಲ್ಲಾ ಹಿಂಗಿಂಗದರೀ ನಾನು ಬಲಗೈಲೆ ಪೆಟಿಗೇ ಬಾರಸತೇನು ದಡ್ಡ ಬೀಳತಾವ ಬೆಟ್ಟಕ್ಕ. ಅದರ ದಶಿಂದ ಬ್ಯಾಡದು- ''ಪಾಠಾ ಕಾಯ ಝಾಲ '' ಕಡೀಗ ಹಿಂಗ ಮರಾಠಿಯೊಳಗ ಅಂದರರವರು ಆವಾಗ ಬೆಂಡಿಗೇರಿಯವರು ಅಲ್ಲಿ ಕಲಿಲಿಕ್ಕೆ ಬರತಿದ್ರು ಆವಾಗ ನನಗ ಗುರುತಾಗಿದ್ದು. ಶಾಪೂರದಿಂದ ಅವರ ಬರತಿದ್ರಿಲ್ಲೆ ಹಂಗ ಮುಂದ ಅಲ್ಲಿ ಗುರುತಾದ ಮ್ಯಾಲ ಅಲ್ಲೊಂದು ಐದಾರ ವರ್ಷ ಕಲೀತಿದ್ರು ಮುಂದ ಮೆಹಬೂಬ ಸಾಹೆಬ್ರು ಪುಣೆಕ್ಕೆ ಹೋದ್ರು. ಮುಂದ ಅವರು ಎಲ್ಲಿ ಕಲಿತ್ರು ನನಗೇನ ಗುರ್ತಿಲ್ಲ ಪರಂತು ಅನಕಾತಾ ಎಷ್ಟೋ ಅವರು ಅವರನ್ನ ಕಲಿಸಿದ್ರವರಿಗೆ ಭಾಳ ಹೇಳಿದ್ರವರಿಗೆ ಎಲ್ಲಿ ನೋಡಾಕ ಹತ್ತೀದಿ ನೀ ತಬಲಾ ಕಡೆ ನೋಡ ಅಂತಿದ್ರವರಿಗೆ. ಎಲ್ಲಾ ಅವನ್ನ ನೋಡಿದ್ವಿ ಮುಂದ ಛಲೋ ಬಾರಸ್ಲಾಕ ಹತ್ತಿದ ಮ್ಯಾಲ ಅವಗ ನನ್ನ ಪ್ರೋಗ್ರಾಮ ಬಾರಸೂದಂದ್ರ ಆನಂದ. ನಿಮಗ್ಹ್ಯಾಂಗ ಆನಂದ ಹಂಗ ನಮಗೂ. ಇಲ್ಲಿ ಪೋಗ್ರಾಮ ಐತೆಂದ್ರ ಅವ ಬರಾಂವ. ಅಲ್ಲೆ ಯಾರನಾರ ಹಿಡಕೊಂಡ ಬರತಿದ್ದ ಬಾರಸತಿದ್ದ. ಹಿಂದಕಿಲ್ಲಿ ಶಾಪೂರಕ್ಕೆ ದೇವೂಕರ ಮಾಸ್ತರ ಅಂತ ಇದ್ರು. ಅವರು ಹಾಡಿನ ಪ್ರೇಮಿ ಎಲ್ಲಾ ಮಂದಿನ್ನ ಕೂಡಸತಿದ್ರು ಗಣೇಶ ಚತುರ್ಥಿಯೊಳಗೆ ಆ ದಿವಸ ಸ್ಪೇಶಲ್ ನಂದು ಮತ್ತ ಅವಂದು ಪ್ರೋಗ್ರಾಮ ಇರತಿತ್ತಲ್ಲೆ. ಛಲೋ ಹೋಳಗೀ ಊಟಾ ನಮ್ಮಿಬ್ಬರಿಗೂ ಉಣಸತಿದ್ರು. ಮುಂದ ಏನಾತಂದ್ರ ಹೀಂಗ ಒಮ್ಮೊಮ್ಮ ಪ್ರೋಗ್ರಾಮಕ್ಕಾವಾಗ ಎಷ್ಟೋ ಸರತೆ ಆನಂದದಿಂದ ಬಾರಸತಿದ್ರು. ಮುಂದೆ ಮಲಿಕಾರ್ಜುನ ಬುವಾ ನಮಗೆ ಸಾಥಿಗೆ ಕರ್‍ಯಾಕೆ ಹತ್ತಿದ್ರು ಆವಾಗ ಅವರಿರಾವು ಬೆಂಡಿಗೇರಿ ಸಂಗತಿ. ಬಸವಣ್ಣೆಪ್ಪಾ ಮತ್ತ ನಾನ ಎಷ್ಟೋ ವರ್ಷ ಅವರಿಗೆ ಸಾಥಿ ಮಾಡಿದ್ವಿ. ಗೋವಾಕ್ಕೊಮ್ಮೆ ಹೋದಾಗ ಪಣಜಿಯೊಳಗೆ ಒಂದ ಪ್ರೋಗ್ರಾಮ ಇತ್ತು ಮಲಿಕಾರ್ಜುನ ಬುವಾವ್ರದು. ನಾನು ಬೆಂಡಿಗೇರಿ ಹೋಗಿದ್ವಿ. ಆ ವೇಳೇಕ ಪು.ಲ. ದೇಶಪಾಂಡೆ ಅಂತ ಸಾಹಿತಿ ಇದ್ರು. ಮರಾಠಿ ಸಾಹಿತಿ ಕೇಳಾಕ ಬಂದಿದ್ರು. ಜೋತ್ಸ್ನಾ ಬೋಳೆ ಹೋತೀ ತ್ಯಾ ವೇಳಿ. ಅಮಚ್ಚಾ ಪೋಟೋ ಆಹೆ ಇಥ ಆದು ಪ್ರೋಗ್ರಾಮ ಛಲೋ ಆತು. ಛಲೊ

ಆದ ಕೂಡ್ಲೆ ಪು.ಲ. ಏನಂದ್ರು ಬ್ಹಾಳ ಛಲೊ ನಿಂದು ಪ್ರೋಗ್ರಾಮ ಆಯ್ತಿಲ್ಲೆ ''ಹೆಬಗಾ ಹೆ ತಬಲ ಜಿ ಬಗಾ ಕಸ ಅಹೇತ ಅಣಿಮಗ ಹೇ ಬಗಾ ಪೆಟೀ ವಾಲೆ'' ಇವರ ಹ್ಯಾಂಗಿದ್ರಂತ ಹೇಳಿ ಬಸವಣ್ಣೆಪ್ಪಾ ಬಿಜಾಪುರ ಇದ್ರಂತ ನನ್ನ ಪ್ರೋಗ್ರಾಮ ಛಲೋ ಆತು.

ಸಂದರ್ಶಕ : ಹೌದರಿ ಬಟ್ಟ ಅವರ ಹೀಂಗ ಹೇಳತಿದ್ರು ಸಾಥಿದಾರ----

ಬಿಜಾಪುರೆಯವರು : ಅಗದಿ. ಸಾಥಿದಾರ ಬಸೂನಸ ಪ್ರೋಗ್ರಾಮ ಚಾಂಗಲ ಮಾಜ ಹೀಂಗ ಅಂತಿದ್ರು.

ಸಂದರ್ಶಕ : ಮತ್ತ ಈ ಮಂದಿ ಯಾಕ ಹೇಳೂದುಲ್ಲಂತ

ಬಿಜಾಪುರೆಯವರು : ಯಾರ s

ಸಂದರ್ಶಕ : ಈಗಿನ ಜನ

ರಾಮಭಾವು ಅವರು : ಈಗ ಅವರದು ಹೋಗತತೆ ಹಾಡವರ ಅವರದೂ ಕಡಮಿ ಆಗ್ತೈತೆಲ್ಲಾ.

ಸಂದರ್ಶಕ : ಏ ! ಏನ ಪದ್ಧತೀರಿ

ಬಿಜಾಪುರೆಯವರು : ಏ! ಮತ್ತೇನ ಹೇಳೊದು ಮಲ್ಲಿಕಾರ್ಜುನ ಬುವಾ ತುಮಾಲಾತರಹೇ ನಾಹೀ ಹೈ ಸಾಂಗತೋ ಸಾಥಿದಾರ ಮ್ಯಾಲೆ ಭಾಳ ಖುಷ. ಆ ದಿವಸ ಹೀಂಗದ ಕೂಡ್ಲೆ ಇವರಿಬ್ರುದಾರಂತ ಹಾಡಾಗೇತಿನಂದ ಹಿಂಗ ಸಾಥಿದಾರ ಮ್ಯಾಲೆ ಭಯಂಕರ. ಥೋಡೀ ದಿವಸ ನೀವ ಹೋಗಿತಿದ್ರಿಲ್ಲಾ ಬಾರಸಾಕ ಅವರಗೂಡ.

ಸಂದರ್ಶಕ : ಹೌದ್ರಿ ಸಂಗೀತ ಸಮ್ಮೇಳನಲ್ಲೆಲ್ಲಾ ಬಾರಸೀನಲ್ರೀ ಸರ್ ನಾನು ಇತಿತ್ಲಾಗಿ ನನ್ನ ತಗೊಂಡರವುರು. ಅವರ ಹೇಳಿದ್ರು ಸ್ವಲ್ಪ ಸಂಗೀತ ತಿಳದ ಬಾರಸುವವಾ ಅಂದ್ರ ಇವನೊಬ್ಬನs ಅಂತ ಹೇಳಿತಿದ್ರವರು ಮನಸೂರವರು.

ಬಿಜಾಪುರೆಯವರು : ಹೇ ಠೇಕಾ ಲಾವಾಯಿಚ ಬಸವಣ್ಣಾ ಕಡೆ ಏಜ ಹೇ ಹೋತೆ ಬಸವಣ್ಣೆಪ್ಪಾ ಕಡೆ ತೀ ಠೇಕಾ ಲಾವಲ ಲಯ ಆಸಿ ಗಾಡಿಲಿ ಜಾತಿ ಹೋತಿ ಅಂದರ ಲಯಾ ಹೀಂಗ ಇತ್ತ ನಿಮ್ಗ ಹೇಳ್ತೆನು. ಒಮ್ಮೆ ಲಯ ಕೊಟ್ರ ಮುಗಿತು. ನಿಮ್ದೊಂದು ತಾಸಾಗಲಿ ದೀಡ ತಾಸಾಗಲಿ.

ಸಂದರ್ಶಕ : ಅದs ಲಯದಾಗಿರೊದು

ರಾಮಭಾವು ಅವರು : ಲಯ ಫಾರ ಛಾನ ಥಿ

ಒಮ್ಮೆ ಅಲ್ಲೇ ಮನ್ಯಾಗs ಕೂತಿದ್ವಿ ಕಾಣಸತೈತಿ ಮತ್ತೊಬ್ಬರ್ಯಾರೋ ಮುಸುಲ್ಮಾನ ತಬಲಜಿ ಬಾರಸತಿದ್ದ ಅವರ ಕುಡ

ಸಂದರ್ಶಕ : ನಿಜಾಮುದ್ದೀನ್

ರಾಮಭಾವು ಅವರು : ನಿಜಾಮುದ್ದೀನ ಒಮ್ಮೆ ರೇಡಿಯೋ ಸ್ಟೇಶನಕ ಬಂದಿದ್ರು ಆ ವ್ಯಾಳೇಕ ಟೇಕಾ ಹಚ್ಚಿದಾಗ ಏನೋ ಮಾರಾಯಾ ಬಸವಣ್ಣದ್ರ ಛಲೊ ಆಗತಿತ್ತು. ''ಅಸ ಭಾರೀ ಸಾಂಗಿತಲ ದೋನಧಾ ಮಲಾ'' ತೆ ಚಾಂಗಲಾ ವಾಜಣಾರಾ ಮಾಣೂಸತೊ'' ಚೋಲೋ ಇದ್ರ ಬಿಡ್ರಿ ಅವರು ಮತ್ತ ಹಿಂಗಾಗಿ ಕಡಿತನಕನೂ ನಮ್ಮ ಪ್ರೊಗ್ರಾಮದೊಳಗೆ ಬಾರಸಿದರು. ಎಷ್ಟೋ ಜ್ಞಾನ ಕೊಟ್ಟರು ಶಿಷ್ಯ ಮಂದಿಗೆ ಬೆಳಗಾಂವಿಯಿಂದ ಇಬ್ಬರ ಮೂರ ಮಂದಿ ಕಲ್ಯಾಕ ಹೋಗತಿದ್ರು ಧಾರವಾಡಕ್ಕ

ಸಂದರ್ಶಕ : ಗಜಾನನ ಬುವಾ ಜೋಶಿಯವರ ಕಡೆ ಬಾರಸ್ತಿದ್ರಂತಲ್ಲ ಕೇಳಿರೇನು.

ರಾಮಭಾವು ಅವರು : ಒಂದೆರಡು ಪ್ರೊಗ್ರಾಮ ಬಾರಸೀದ ತಿಳೀತಲ್ಲೊ ಹೀಗೂ ಅಂದ್ರು ''ತಬಲಜಿ ಗಟ್ಟಿ ಹೊ ತಾಳಾಲಾ'' ಯಾಕೆಂದರೆ ತಾಳಕ್ಕ ಭಯಂಕರ ತಿರಖ್ವಾಂದೂ ಬಹಳಾ ತಿರಖ್ವಾನ ಕುಡ ಒಮ್ಮೆ ಇಲ್ಲೆ ಬಡದಾಟ ಆತ್ರಿ ಆರ್ಟ ಸರ್ಕಲ ಪ್ರೊಗ್ರಾಮದೊಳಗ ಕಡಿ ಕಡೀಗ ನಿಂದ ನೀ ಬಾರಸು ನಂದ ನಾ ಬಾರಸತೇನಿ ಇಲ್ಲಿ ತನಕಾ ಆತು ಸ್ಟೇಜ ಮ್ಯಾಲ. ಸ್ವಭಾವಲೆ ಭಾಳ ಛಲೋ ಬಸವಣ್ಣೆಪ್ಪಾ ''ಅಣಿ ಸ್ವರ ಜ್ಞಾನ ಘಾರ ಚಾಂಗಲ ಹೋತೋ ತ್ಯಾಲಾ ಕುಠೆ ಹಿ ತಂಭೂರಾ ದಿಸಲಾ ಕಿ ಜಮಾಯಿ ದೇಣಾರಚ ಅಣೀ ಗಾಣೇಲಾ ಸಂಗಣಾರಚ ಅರೆ ತರ್ರಿ ನಾ ಕೂಡಿಸಿಕೊಡತೇನಿ ನಿಮಗ. ನಿವ್ವಾಕ ಅಸತೋಽ ಸೂರ ಅಣಿ ತಾಲ ದೋನೀ ಚಾಂಗಲ ಹೋತ. ಖರೆ ಕಲಾಕಾರರೂ ಹಂಗ ಇರತಿದ್ರು.

## ೩. ದಿ. ಪಂಡಿತ ಡಾ. ಬಿಂದು ಮಾಧವ ಪಾಠಕ (ಬೀನವಾದಕರು) :

ಬಿಂದು ಮಾಧವ ಪಾಠಕ: ಪ್ರಸಿದ್ಧ ತಬಲಾವಾದಕ ಅಷ್ಟೇ ಅಲ್ಲಾ ಹಾಡೂ ಹಾಡುತ್ತಿದ್ದ ಬೆಂಡಿಗೇರಿ ಹಾಡೂ ಹಾಡುತ್ತಿದ್ದ ಆಂದರೇನು ಹಂಗs ಸುಮ್ಮನs ಇದೂ ಮಾಡಲಿಕ್ಕೆ ಹ್ಯಾಂಗ ಹಾಡಬೇಕು ಹ್ಯಾಂಗ ಇದ ಮಾಡಬೇಕು. ವಿಚಿತ್ರ ವಿಚಿತ್ರ ಪದ್ಧತಿಯಿಂದ ಸಮ ಮ್ಯಾಲೆ ಹೆಂಗ ಬರಬೇಕು. ರಾಗ ರಾಗಿಣಿ ಅಂಕಾ ಭಯಂಕರ ಜ್ಞಾನ ಇತ್ತ ವಗ. ಇಂಥವರು ಇಂಥಾ ರಾಗ ಹಾಡಿದರು ಅಂಥವರು ಅಂಥ ರಾಗ ಹಾಡಿದ್ರು ಅಂತ ಹೇಳತಿದ್ದಾವಾ. ಹೀಗಾಗಿ ಒಂದ ನಮೂನಿ ಹೆದರಕಿ ಬರತಿತ್ತ ಮತ್ತ ಅವನ ಹೆಸರ ಕೇಳಿದ್ರ. ಹೆದರಕಿ ಬರತಿತ್ತ ಆವಾಗ. ಏ ಏನಪ್ಪಾ ದೊಡ್ಡ ತಬಲಜಿ ಅಂತ ಹೇಳಿ ಇದು ಮಾಡಿದವ. ಬೆಳಗಾಂವದಿಂದ ಬರಬೇಕವರು. ಹೀಂಗ ಹೆದರಕಿ ಉಂಟಾಗುವಂತಾ ತಬಲಜೀನೂ ಇದ್ದಾ. ಮತ್ತ ದೊಡ್ಡ ದೊಡ್ಡವರ ಸಂಗತಿ ಸಾಥಿ ಮಾಡಿ ಹೌದಪ್ಪಾ ಅನಿಸಿಗೊಂಡಿದ್ದಾ. ಏನ ಬಾರಸತಾನೀವಾ ಅಂತ ಎಬಿಸಿದ್ದು ಉಂಟು. ಕೆಲವರು ಇವನ ಪರ್ಸಾನ್ಯಾಲಟಿ ನೋಡಿದ ಕೂಡಲೆ ಆದರ ಒಂದ ಮುಖಡಾ ಗಿಖಡಾತಗೊಂಡ ಸಮ್ಮಿಗೆ ಬಂದ ಕೂಡ್ಲೆ ಎಲ್ಲಾರು ಎಚ್ಚರಾಗಿ ಎಲ್ಲಾ ಇದು ಆಗಿ ಇದರಿಂದ ಕೂಡತಿದ್ದರವರು ಆಟೆನಶನ್‌ದಿಂದ ಕೂಡತಿದ್ದರವರು. ಅವರನ ನೋಡಿದ ಕೂಡಲೆ ಒಂದ ನಮೂನೆ ಹೆದರಕೆ. ಒಂದ ನಮೂನೆ ಶ್ರದ್ಧೆ ಒಂದ ಒಳ್ಳೆ ಭಾವನೆ ಬರತಿತ್ತು. ಹೌದಪ್ಪಾ ಅಂತ ಹೇಳಿ ಅವ ಮೆಹಬೂಬಖಾನ ಹತ್ತರ ಕಲತಾನವಾ. ಅವಗ ಗುರುಗಳ ಬಗ್ಗೆನು ಸಾಕಷ್ಟು ಶ್ರದ್ಧೆ, ಭಕ್ತಿ ಇತ್ತು ಅವಗ'' ಗುರುಗಳ ಬಗ್ಗೆ ಭಯಂಕರ ಮಾತಾಡತಿದ್ದ. ಹೊಸದಾಗಿ ಕರ್ನಾಟಕ ಕಾಲೇಜಿನಲ್ಲಿ ಬಂದರಲ್ಲಾ ತಬಲಜಿ-ತಬಲಾ ಪ್ರೊಫೆಸರ ಅಂತ ಹೇಳಿ ಸಾಕಷ್ಟು ಇದ ಆತ ಅವಗ.

ಸಂದರ್ಶಕ : ಇಲ್ಲಿ ಬಂದ ಮ್ಯಾಲ ಮನಸೂರವರ ಪರಿಚಯವಾಯ್ತೇನ್ರಿ ಅವರ್‍ಗ?

ಬಿಂದು ಮಾಧವ ಪಾಠಕ : ಹೌದೌದ, ಮನಸೂರ ಪರಿಚಯ ಅಂದ್ರ ಮನಸೂರವರಾವಾಗವಾಗ ಮನಿಯೊಳಗೂ ಹೆಚ್ಚ ಸಾಥಿ ಅವರ ಯಾವಾಗಲೂ. ಅಷ್ಟs ಮತ್ತ ಸರಳ ಸ್ವಭಾವ ಅಗದಿ. ಹಿಂದ ಮುಂದ ಏನೂ ಇದ ಇಲ್ಲ. ಏನಿದ್ರು ಪಟಕ್ಕನ ಮಾತಾಡಿ ಬಿಡೋದು ಹಿಂಗ. ಇವತ್ತ ಛಲೊ ಹಾಡಿದರಂದರ ಛಲೊ ಅನ್ನೊದು ಏ ಛಲೊ ಹಾಡಲಿಲ್ಲಂದರ ಏ ಯದ್ವಾ ತದ್ವಾ ಹಾಡಿದರಂಥ ಬಯ್ದು ಬಿಡವರು ಹೀಂಗ ಒಂದ ಇದ ಇತ್ತವರದು ಮತ್ತ ಕಾಲೇಜನ್ಯಾಗ ಇದ್ದಾಗನೂ ಈ ಪರಿಕ್ಷಾಕ್ಕಂತ ಹೇಳಿ ಬರತಿದ್ರಲ್ಲಾ ಆವಾಗ ಭಯಂಕರ ಪರಿಚಯ ಇನ್ನೂ ಸ್ವಲ್ಪ ಅಂದರೆ ಹ್ಯಾಂಗ. ಪರಿಕ್ಷಾ ಹ್ಯಾಂಗ ತೋಗೋಬೇಕು, ಹ್ಯಾಂಗ ಕೇಳಬೇಕು ಅನ್ನೂದನ್ನು ಸುಧಾ ಅವನು ಹೇಳತಿದ್ದಾನವಾಗವ. ಏ ಹೀಂಗ ಮಾಡಬೇಕು ಯಾಕಂದ್ರ ಬಾಂಬೆ ಗೀಂಬೆ ಸೈಡಗೆ ಪರಿಕ್ಷೆಕಂತ

ಹೇಳಿ ಅವನೂ ಕೆಲಸಾ ಮಾಡ್ಯಾನಲ್ಲಾ. ಗಂಧರ್ವ ಮಹಾವಿದ್ಯಾಲಯದೊಳಗೆ ಹಿಂಗ ತೆಗೊಂಡ್ರ ಹೀಂಗ ಮಾಡಬೇಕು. ಇವ ಭಯಂಕರ ಒಂದು ಅಭ್ಯಾಸ ಮಾಡಿದವ. ಏನ ಗುಣೀ ಮನಶ್ಯಾ ಇದ್ದ.

ಸಂದರ್ಶಕ : ನಿಮ್ಮ ಕಡೆ ಸಾಥ ಮಾಡ್ಯಾರೇನ್ರಿ ?

ಪಾಠಕ ಅವರು : ರಗಡ ಸಲ. ನನಗ ಹೊರಗೂ ಮಾಡ್ಯಾನ ಆಕಾಶವಾಣ್ಯಾಗೂ ಮಾಡ್ಯಾನ ಅಗದೀ ರಗಡ ಸಲ. ಮತ್ತ ಬೀನಗೆ ಸಿತಾರಗೆ ಯಾ ನಮೂನಿ ಸಾಥ ಮಾಡಬೇಕನ್ನೂದು ತಿಳವಳಿಕಿತ್ತವಗ. ಅಂದರ ಒಟ್ಟ ತಿಳಿದ ಸಾಥಿ ಮಾಡತಿದ್ದ ಅದಕ್ಕs ಮಹತ್ವ ಕೊಡಬೇಕವಗ. ಬೀನಕ್ಕ ಧಡಲ್ ಪಡಲ್ ಮಾಡಕೋತ ಬಾರಸಲಿಲ್ಲ. ಎಂದು ಬಾರಸಲಿಲ್ಲವ ಮತ್ತ ಸಿತಾರಗೂ ಹಂಗೂ ಮಾಡಲಿಲ್ಲ. ವೋಕಲನವರಿಗೂ ಸಾಥೀ ಛಲೋ ಮಾಡಿದಾ. ಹಿಂಗಾಗಿ ಯಾ ಜನರಿಗೆ ಹೆಂಗ ಸಾಥಿ ಬೇಕನ್ನುದು ಅವ ತಿಳಕೊಂಡ ಸಾಥಿ ಮಾಡ್ತಿದ್ದ. ಆದರೂ ತಿಳವಳಿಕಿ ಒಂದ ಭಯಂಕರ ಇತ್ತವಗ. ಮತ್ತ ಏನ ಬಾರಿಸಿದ್ರೂ ಬೋಲ ಗೀಲ ಸ್ಪಷ್ಟ ಅಗದಿ. ಏನ ನುಂಗಿ ದಡ ಬಡ ಮಾಡಿ ಹಂಗೇನಾಗಿದ್ದು ನಮಗೇನ ಇದು ಆಗಿಲಪಾ. ಅಗದಿ ಎಲ್ಲಾರ ಬಾಯ ಒಳಗ ಬೆಂಡಿಗೇರಿ ಸಾಥಿ ಅಂತ ಹೇಳಿದ ಕೂಡಲೇ ಎಲ್ಲಾರೂ ಮೆಚ್ಚತಿದ್ರವಗ. ಏ ಬೆಂಡಿಗೇರಿ ಸಾಥಿದಾರೊ. ಏನ ಹೆದರಕಿಲ್ಲ ಸಣ್ಣ ಹಡುಗರ. ಜತಿಗೆ ಸಣ್ಣ ರೀತಿ ದೊಡ್ಡವರ ಜತಿಗೆ ದೊಡ್ಡ ರೀತಿ ಹಿಂಗೂ ಸಾಥಿ ಮಾಡತಿದ್ದ. ಹಿಂಗಾಗಿ ಛಲೊ ಒಂದ ಇದು ಮಾಡಕೊಂಡ. ಮತ್ತ ಬೀನಕಾರಾ ಸಾಥ ತಬಲಜಿ ಅಂತನೂ ಹೆಸರ ಬಂದಿತ್ತವಗ.

## ೪. ಪಂ ಪಂಚಾಕ್ಷರಿ ಸ್ವಾಮಿ ಮತ್ತಿಗಟ್ಟಿ (ಗಾಯಕರು) :

ಪಂಚಾಕ್ಷರಿಯವರು : ಈಗ ನೋಡು ಬೆಂಡಿಗೇರಿಯವರ ತಂದಿ ತಾಯಿಗೆ ಮಕ್ಕಳಾಗಲಿಲ್ಲ ಒಬ್ಬರು ನಿಮ್ಮಂಥವರು ದೊಡ್ಡವರು ಹಿಂಗ ಅಥಣಿ ಶಿವಯೋಗಿಗಳ ಹತ್ರ ಹೋಗ್ರಿ ಅವರು ನಿಮಗೆಲ್ಲಾ ಉತ್ತರಾ ಕೊಡತಾರ ನೀವು ಅಲ್ಲೇ ಇಲ್ಲೇ ಅಡ್ಡ್ಯಾಡಾಕ ಹೋಗಬ್ಯಾಡ್ರಿ ಅಂತ ಯಜಮಾನರು ಹೇಳಿದ್ರು. ಆ ಪ್ರಕಾರ ಗಂಡಾ ಹೇಂಡ್ತಿ ಕೂಡಿ ಅಥಣೀಗೆ ಹೋದ್ರು. ಅಥಣಿಗೆ ಹೋದ ಕೂಡ್ಲೆ ಶಿವಯೋಗಿಗಳು ಬಂದ್ರು. ದಿವ್ಯ ದೃಷ್ಟಿಯವರವರು. ಎರಡ ಖಾರಿ ಕಾಯಿ ಕೊಟ್ಟರು ಒಂದ ಕೆಟ್ಟಿತ್ತು ಒಂದ ಛಲೋ ಇತ್ತು. ಖಾರಿ ಕಾಯಿ ಸೇವನಾ ಮಾಡರಿ ಅಂತಂದ್ರು. ಆ ಖಾರಿ ಕಾಯಿ ತಗೊಂಡ ಹೋಗಿ ಮನ್ಯಾಗ ಸ್ನಾನಾ ಪೂಜಾ ಮುಗಿಸಿಗೊಂಡು ಸೇವನಾ ಮಾಡಿದ್ರು ಆ ಆಶೀರ್ವಾದದಿಂದಲೇ ಬೆಂಡಿಗೇರಿ ಜನನ. ಇದು ನಿಜವಾದ ಮಾತಿದು.

ಆದರ ಶಿವಯೋಗಿಗಳ ಆಶೀರ್ವಾದ ಹ್ಯಾಂಗಿತ್ತಂದ್ರ ಆಶೀರ್ವಾದದಿಂದನs ಅವರ ಮಗ ಅಂಗವಿಕಲ ಆದ. ಎಷ್ಟೊ ದಿವಸ ಅಂಗವಿಕಲನಾಗಿದ್ದ. ಮುಂದ ವಯಸ್ಸಾದಂಗಾದಂಗ ಅಂಗವಿಕಲತೆ ಹೋತು ಮುಂದ ಅವ ಅವರ ತಂದಿಗೆ ಸ್ವಲ್ಪ ಸಂಗೀತದ ಹುಚ್ಚು ಬಹಳ.

ಸಂದರ್ಶಕ : ಅಂಗವಿಕಲ ಅಂದರೇನು ಕೈಕಾಲು ----

ಪಂಚಾಕ್ಷರಿಯವರು : ಕೈಕಾಲು ಅದುವ ಆಗಿ ಬಿಟ್ಟಿದ್ವು. ಮುಂದ ವಯಸ್ಸ ಬಂದಾಂಗ ಗುಣ ಆತು. ಶಿವಯೋಗಿಗಳ ಆಶೀರ್ವಾದ ಆಯ್ತು. ಮತ್ತೊಂದೇನೂ ಅಲ್ಲ. ಇನ್ನ ತಂದಿಯವರಿಗೆ ಸ್ವಲ್ಪ ಸಂಗೀತದ ಹುಚ್ಚ ಬಹಳ. ಅವರ ಇರೂದು ಶಾಪೂರ ಬೆಳಗಾಂವ. ಶಾಪೂರದಾಗ ಮನಿ ಐತೊಂದು ಅಲ್ಲಿರತಿದ್ರು. ಆಗ ಅವರು ಮಗಗ ತಮದ ತಬಲಾದ ಹುಚ್ಚು ಬಹಳ ಅವರ ತಂದಿಯವರಿಗೆ. ಅದನ ಮಗಗ ಕಲಿಸಬೇಕಂತ ಹೇಳಿ ಒಬ್ಬ ಇವರು ತಬಲಜಿ ಇದ್ದರು. ಅವರ ಹೆಸರು ಮೆಹಬೂಬ ಖಾನಸಾಹೇಬ ಮಿರಜಕರ, ಮೆಹಬೂಬ ಖಾನ ಸಾಬರ ಹತ್ತರ ಕಲ್ಯಾಕ ಇಟ್ಟರ ತಂದಿಯವರು. ಮೆಹಬೂಬಖಾನಸಾಬರು ಪಾಪ ಇದನ್ನೆಲ್ಲಾ ಹಾಲಚಾಲ ನೋಡಕೊಂಡು ಏನೂ ತೊಗಳಲಾರದ ಪುಕ್ಕಟ ವಿದ್ಯಾದಾನ ಮಾಡಿದರು ಇವಗ. ಮಮ್ಮುಲಾಲ ಇವರ ಕೂಡs ಕಲಿತಿದ್ರು. ಮಮ್ಮುಲಾಲ ಮೆಹಬೂಬಖಾನ ಸಾಹೆಬ್ರ ಅಳಿಯ ಅವ. ಬೆಂಡಿಗೇರಿ ಮಮ್ಮುಲಾಲ ಕೂಡೇ ಮೆಹಬೂಬಖಾನ ಸಾಹೆಬ್ರ ಹತ್ತರ ಅಭ್ಯಾಸ ಮಾಡುತ್ತಿದ್ರು. ಎಷ್ಟೂ ದಿವಸ ಅಭ್ಯಾಸ ಮಾಡಿ ಅದು ಶಿವಯೋಗಿಗಳ ಆಶೀರ್ವಾದ ಮತ್ತೊಂದ ಏನೂ ಅಲ್ಲ, ಹಂಗ ಮುಂದ ಗಂಧರ್ವ ಮಹಾವಿದ್ಯಾಲಯ ದೇವಧರ ಹತ್ರ ಮುಂಬೈಕ ದೇವಧರ ಸ್ಕೂಲನ್ಯಾಗ ಇವರು ಹೋದ್ರು ಅಲ್ಲೆಲ್ಲಾ ಸಾಥ ಮಾಡಕೋತ ಸಾಧಾರಣ ಬೆಂಡಿಗೇರಿ ಇಂಡಿಯಾದಾಗ ಇಂಥವರ ಕೂಡ ಬಾರಸಿಲ್ಲಾ

ಅನ್ನಾಂಗಿಲ್ಲಾ ಎಲ್ಲಾರ ಕೂಡಾನೂ ಬಾರಸ್ಯಾನವ. ಮತ್ತ ಅಷ್ಟ ತಾಕತ್ ಇತ್ತು ಅಷ್ಟು ದೊಡ್ಡವರ ಆಶೀರ್ವಾದ ಇತ್ತು ಮತ್ತೊಂದು ಏನೂ ಅಲ್ಲ. ಮುಂದಲ್ಲೆ ಗಂಧರ್ವ ಮಹಾವಿದ್ಯಾಲಯ ದೇವಧರನ ಹತ್ತರ ಇದ್ಕೊಂಡು ಎಲ್ಲಾರ ಕಡೆ ಅಡ್ಯಾಡಕೋಂತ ಪ್ರೋಗ್ರಾಮನಲ್ಲಿ ಸಾಥಿ ಮಾಡಕೋಂತ ಸಾಥಿ ಮಾಡಕೋಂತ ಮುಂದ ಅವನು ಹೊಳ್ಳಿ ಊರಿಗೆ ಬಂದ ಬೆಳೆಗಾಂವನ್ಯಾಗ ಸ್ವಲ್ಪ ಟಿವಶನ್ ಗಿವಶನ್ ಮಾಡಾಕ ಹತ್ತಿದ. ಪರಿಸ್ಥಿತಿ ಅವರದು ಇದು ಇತ್ತ ಅವರದು. ಟಿವಿಶನ್ ಗಿವಶನ್ ಮಾಡಕೋಂತ ಕಡೀಗಿ ಧಾರವಾಡಕ ಬಂದ. ಧಾರವಾಡಕ ಬಂದಾಗನ ಸ್ವಲ್ಪ ಮನಸೂರವರ ಸಹವಾಸ ಭಾಳ ಇತ್ತ ಅವಗ ಮನಸೂರವರ ತಂದಿ ಇಲ್ಲಿ ಧಾರವಾಡಕಿಟ್ರು ಇಟ್ಟ ಮ್ಯಾಲ ಮುಂದ ಅವಾ ಧಾರವಾಡದಾಗ ಕರ್ನಾಟಕ ಕಾಲೇಜನ್ಯಾಗ ಮ್ಯೂಜಿಕ ಡಿಪಾರ್ಟಮೆಂಟನ್ಯಾಗ ಲೆಕ್ಚರರ ಅಂತ ಹೇಳಿ ಬಂದ ತಬಲಾ ಸೆಕ್ಷನಗ ಮ್ಯೂಜಿಕ ಡಿಪಾರ್ಟಮೆಂಟಗೆ ಬಂದ ಅಲ್ಲಿ ಎಷ್ಟೋದಿವಸ ಸರ್ವೀಸ ಮಾಡಿಕೋಂತ ಮಾಡಿಕೋಂತ ಮುಂದ ಬೆಂಡಿಗೇರಿ ಇಂಥಲ್ಲೇ ಬಾರಸ್ಯಾನ ಇಂತಲಿಲ್ಲ ಅನ್ನಂಗಿಲ್ಲ ಇಂಡಿಯಾ ತುಂಬ ಎಲ್ಲಾ ಕಡೇನೂ ಇವನ ಪ್ರಚಾರ ಇತ್ತು. ಎಲ್ಲಿ ಕೇಳಿದ್ರೂ ಬೆಂಡಿಗೇರಿ ಹೆಸರ ಬರತೈತಿ. ಇದೊಂದು ನಿಜವಾದ ಮಾತಿದು. ಬೇಕಾದಲ್ಲಿ ಕೇಳ್ರಿ ನೀವು ಬಸವರಾಜ ಬೆಂಡಿಗೇರಿ ಅಂದ ಕೂಡ್ಲೆ ಓ! ಉತ್ತಮ ತಬಲಜಿ ಅಂತ ಎಲ್ಲಾರು ವರ್ಣನಾ ಮಾಡತಾರ ಮತ್ತ ಬಡೆಗುಲಾಮಲಿ ಕೂಡ ಇವನ ಸಾಥ ಇತ್ತು ಹುಬ್ಬಳ್ಳಿಗೆ. ನನ್ನ ಕರಕೊಂಡ ಹೋಗಿದ್ದವ. ಬೆಂಡಿಗೇರಿ ನಾವಿಬ್ಬರೂ ಕೂಡಿ ಒಂದs ಖೋಲ್ಯಾಗ ಇದ್ವಿ. ನಾನೂ ಮನಸೂರ ಕಡೆ ಕಲೀತಿದ್ದೆ. ಒಂದು ಖೋಲ್ಯಾಗ ಇರತಿದ್ವಿ ಇವನ ಸಾಥಿಗೆ ಹಾಕಿದ್ರು ಬಡೆಗುಲಾಮಲಿ ಕೂಡ. ಇಬ್ಬರೂ ಕೂಡಿ ನನ್ನ ಕರಕೊಂಡ ಹೊದ್ರು ಇಬ್ಬರೂ ಕೂಡಿ ಹೋದ್ವಿ. ಇವನ ನೋಡಿ ಅವ ಬಡೇಗುಲಾಮಲಿ ಏನೋ ತಿಳಿಕೊಂಡ ಬಿಟ್ಟಿದ್ದ. ಏನೋ ಏನ ಬಾರಸತಾನೀ ಹುಡುಗ ಏ ಹ್ಯಾಂಗದಾನ. ಬಡೇಗುಲಾಮಲಿಗೆ ಕಲ್ಪನಾ ಇದ್ದಿಲ್ಲದು. ಗಾಣೆ ಸುರು ಆತೂ ಎಲ್ಲಾ ಆತೂ.ಕಡಿಗೆ ಒಂದು ಠುಮರೀ ಸುರೂ ಮಾಡಿದಾ ಅವ. ಠುಮರಿ ಸುರು ಮಾಡಿದಾ ''ಆಯೇನಾ ಬಾಲಮ'' ಅದನ ಸುರು ಮಾಡಿದ ಕೂಡಲೇ ಇವಾ ಠೀಕಾ ಕೊಟ್ರ ಕುಣದಾಡಾಕ ಹತ್ತಿ ಬಿಟ್ಟವ ಬಡೇಗುಲಾಮಲಿ ಡ್ಯಾನ್ಸ ಮಾಡಾಕ ಹತ್ತಿದವ. ಇದರ ಕೂಡ ಇವನ ಠೀಕಾ ಕೇಳಿ ಇಷ್ಟ ಆನಂದಾತವಗ ಕಡೀಗೆ ಬೆಂಡಿಗೇರಿ ನಾ ಏನs ತಿಳಿಕೊಂಡಿದ್ದೆಲ್ಲಾ ಅಂತ ಹಿಂದಿಯೊಳಗ ಮಾತಾಡಾಕ ಹತ್ತಿದರವರು ನಾ ಏನೋ ತಿಳಿಕೊಂಡಿದ್ದೆ ನಿನ್ನ. ನೀ ದೊಡ್ಡ ತಬಜೀsಪಾ ದೊಡ್ಡ ತಬಲಜಿ. ಭಾಳ ಆನಂದಪಟ್ಟವಾ. ಆವಾಗ ಅವಗ ದೀಡ ನೂರ ರೂಪಾಯಿ ಕೊಟ್ಟ ಬರೇ ಬಡೇಗುಲಾಮಲಿ ಆಗಿನ ಕಾಲಕ್ಕೆ. ಸಾಧಾರಣ ಇಗ ನೋಡ್ರಿ ಒಂದ ಮೂವತ್ತ ವರ್ಷದ ಕೆಳಗಿನ ಮಾತಿದು. ೬೨ ನೇ ೬೩ ನೇ

ಇಸ್ವಾಗಿದ್ದು ನಾನದೇ ಮನಸೂರ ಕಡೇ ಕಲ್ಯಾಕ ಬಂದಿದ್ದೆ. ನಾವಿಬ್ರೂ ಕೂಡಿ ಒಂದ ಖೋಲ್ಯಾಗ ಇರತಿದ್ವಿ ಅವಾಗ ಇಲ್ಲಿ ನೌಕರಿ ಆತು. ಅವಾಗ ಮನಿ ಮಾಡಾಕ ಆಗಲಿಲ್ಲ ಮುಂದ ರಿವಿಜನ ಆಕ್ಕೊಂತ ರಿವಿಜನ ಆಕ್ಕೋಂತ ಪಗಾರ ಹೆಚ್ಚಾದ ಕೂಡಲೇ ಮನಿ ಮಾಡೀದಿಲ್ಲೇ ಧಾರವಾಡಕ್ಕ. ಮಾಡಿಕೊಂತ ಮಾಡಿಕೊಂತ ಮುಂದ ಆ ಬೆಂಡಿಗೇರಿ. ಬೆಂಡಿಗೇರಿ ಬೆಂಡಿಗೇರೀನಽ ಆದ. ಅದರಾಗೇನ ಪ್ರಶ್ನೇನ ಇಲ್ಲ. ಇವತ್ತ ಎಲ್ಲೇ ಕೇಳ್ರಿ ನೀವು ಯಾವದೇ ತಬಲಜಿ ಕೇಳ್ರಿ ಬಸವಣ್ಣಾ ಬೆಂಡಿಗೇರಿ ಅಂದ ಕೂಡ್ಲೆ ಆಹಾ!ವಾ! ಅಂತಾರ ಇದ ನಿಜವಾದ ಮಾತಿದು. ನಾ ವರ್ಣನಾ ಮಾಡೂ ಮಾತಲ್ಲ ಏನಲ್ಲಾ. ಅದು ಇದಿದ್ದ ಸತ್ಯವಾದ ಮಾತಽ. ಇದು. ಮತ್ತ ಇನ್ನ ಹೆಚ್ಚಿಗೇನು ಬೆಂಡಿಗೇರಿ ಬಗ್ಗೆ ಹೇಳೂದಂದ್ರ ಭಾಳ ಕಮ್ಮಿ ಆಗ್ತೈತಿ ಇನ್ನ ಬೆಂಡಿಗೇರಿ ಬಗ್ಗೆ ಏನ ಹೇಳಿದ್ರೂ ಕಮ್ಮೀನ.

## ೫. ಪಂಡಿತ ಚಂದ್ರಶೇಖರ ಪುರಾಣಿಕ ಮಠ(ಗಾಯಕರು) :

ಸುಮಾರು ೪೫ ವರ್ಷಗಳ ಹಿಂದೆ ಬೆಳಗಾಂವಿಯಲ್ಲಿ ಪ್ರಪ್ರಥಮವಾಗಿ ಶ್ರೀಯುತ ಬಸವರಾಜ ಬೆಂಡಿಗೇರಿ ಕಂಡಿದ್ದು ಅದೇ ತಾನೆ ಮುಂಬೈ ಬಿಟ್ಟು ಬೆಳಗಾವಿಗೆ ಅಂದರೆ ಶಹಾಪುರಕ್ಕೆ ಬಂದು ನೆಲೆಸಿದ್ದರು. ನಾನು ನನ್ನ ಅಣ್ಣ ಮೃತ್ಯುಂಜಯ ಬುವಾ ಅಭ್ಯಾಸ ಮಾಡುತ್ತಿದ್ವಿ ಅಣ್ಣನವರಿಂದಾ ಅವರ ಪರಿಚಯವಾಗಿತ್ತು. ಮೇಲಿಂದ ಮೇಲೆ ನಮ್ಮ ಮನೆಗೆ ಬಂದು ಹೋಗುವ ಪರಿಪಾಠವಿತ್ತು. ಹೀಗಾಗಿ ನನಗೆ ಆತ್ಮೀಯರಾದರು. ಬೆಳಗಾವಿಯಲ್ಲಿ ತುಂಬಾ ಜನಪ್ರಿಯ ತಬಲಾವಾದಕರಾಗಿದ್ದರು. ಬೆಳಗಾವಿಯಲ್ಲಿ ಆ ಸಮಯದಲ್ಲಿ ತುಂಬಾ ಪ್ರಸಿದ್ಧ ಗಾಯಕರಿದ್ದರು ಶ್ರೀ. ವ್ಹಿ. ಎ ಕಾಗಲಕರ ಮತ್ತು ಶ್ರೀ ಶಿವರಾಮ ಬುವಾ ವಝೆ, ಶ್ರೀ.ವ್ಹಿ.ವ್ಹಿ. ಉತ್ತರಕರ , ಶ್ರೀ.ಆರ್. ಎನ್ ಜೋಶಿ, ಶಹಾಪುರ ಶ್ರೀ ಜೋಗ ಬುವಾ ಮೊದಲಾದವರಿದ್ದರು. ಅವರೆಲ್ಲರಿಗೂ ತುಂಬಾ ಪ್ರೀತಿಪಾತ್ರರಾಗಿದ್ದರು. ದೊಡ್ಡ ವಿದ್ವಾಂಸರಾದರೂ ಅಂಥ ನಿಗರ್ವಿಗಳು ಸಿಗುವದು ವಿರಳ.

ಆ ಸಮಯದಲ್ಲಿ ಬೆಳಗಾಂವಿ ಕಲಾಕಾರ ಸಂಘವು ಸ್ಥಾಪಿತವಾಯಿತು. ಎಲ್ಲ ಕಾರ್ಯಕ್ರಮಗಳೂ ಶ್ರೀ ಪಂ. ರಾಮ ಬಾವು ವಿಜಾಪುರೆ ಅವರ "ಶ್ರೀರಾಮ ಸಂಗೀತ ವಿದ್ಯಾಲಯ"ದಲ್ಲಿ ಆಗುತ್ತಿದ್ದವು. ಒಂದು ಮಾಸಿಕ ಕಾರ್ಯಕ್ರಮದಲ್ಲಿ ನನಗೆ ಮತ್ತು ಶ್ರೀ.ಬಿ.ವ್ಹಿ. ಕಡ್ಲಾಸ್ಕರ, ಬಿ. ಎಸ್.ಲೋನಕಡಿ, ಶ್ರೀಸಂಗಮೇಶ್ವರ ಗುರವ, ಶ್ರೀ ಕೋಸಂದಳ (ವಾಯಲಿನ್) ಎಲ್ಲರ ಕಾರ್ಯಕ್ರಮದ ಜೊತೆಗೆ ಶ್ರೀ ಬಸವರಾಜ ಬೆಂಡಿಗೇರಿಯವರ ತಬಲಾ ಸೋಲೊ ಮತ್ತು ಅವರ ತಲಾ ಸೋಲೊ ಕೇಳಲು ತುಂಬಾ ಜನವಿದ್ದರು. ಸುಮಾರು ಒಂದು ತಾಸು ಸೋಲೊ ಬಾರಿಸಿದರು ಅವಿಸ್ಮರಣೀಯವಾಗಿತ್ತು. ನನಗೂ ಸಹ ಹಾಡುವ ಅವಕಾಶ ಸಿಕ್ಕಿತು. ನನ್ನ ಜೊತೆ ಶ್ರೀ. ಬೆಂಡಿಗೇರಿಯವರೇ ಆತ್ಮೀಯತೆಯಿಂದಾ ಸಾಥಿಮಾಡಿದರು. ಅಂದಿನಿಂದ ಅವರು ನನ್ನನ್ನು ಬಹಳ ಆತ್ಮೀಯತೆಯಿಂದ ಕಾಣುತ್ತಿದ್ದರು. ಶ್ರೀ ಬಾಜಿರಾವ ಸೊನಾವಣೆ ಕೂಡಾ ಬೆಳಗಾಂವಿಯಲ್ಲಿಯೇ ಇದ್ದರು. ಅವರೂ ಸಹ ಅಂದಿನ ಕಾರ್ಯಕ್ರಮದಲ್ಲಿ ಭಾಗ ವಹಿಸಿದ್ದರು. ಯಾವದೇ ಕಾರ್ಯಕ್ರಮದಲ್ಲಿ ನಾನಿದ್ದರೆ ನಿಮ್ಮ ಜೊತೆ ನಾನೇ ಬಾರಿಸುವದಾಗಿ ಹೇಳುತ್ತಿದ್ದರು. ಅದು ಅವರ ದೊಡ್ಡಸ್ತಿಕೆ ಸಿರ್ಸಿ, ಸಿದ್ಧಾಪುರ, ಧಾರವಾಡದಲ್ಲಿ ಅವರೊಡನೆ ಹಾಡುವ ಸಂಯೋಗ ಸಿಕ್ಕಿತು.

ಬೆಳಗಾವಿಯಿಂದಾ ಬಂದು ಕರ್ನಾಟಕ ಕಾಲೇಜಿನ ಧಾರವಾಡ ಸಂಗೀತ ವಿಭಾಗದಲ್ಲಿ ಉಪನ್ಯಾಸಕರಾಗಿದ್ದರು.

## ೬. ಪಂ. ಟಿ.ವ್ಹಿ. ಕಬಾಡಿ
## (ಖ್ಯಾತ ಹಿಂದುಸ್ತಾನಿ ವ್ಹಾಯಲಿನ ವಾದಕರು)

ನಾನು ಮೊದಲು ಸೊಂಡುರ ಮಹಾರಾಜರ ರೆಸಿಡೆನ್ಸಿಯಲ್ ಕಾಲೇಜಿನಲ್ಲಿ ಸಂಗೀತ ಶಿಕ್ಷಕನಾಗಿ ಸೇವೆ ಸಲ್ಲಿಸಿ ೧೯೭೩ರಲ್ಲಿ ನಿಲಯದ ವಯಲಿನ್ ಕಲಾವಿದನಾಗಿ ಆಕಾಶವಾಣಿಯಲ್ಲಿ ಸೇರ್ಪಡೆ ಆದನಂತರ ಪಂ. ಬಸವರಾಜ ಬೆಂಡಿಗೇರಿಯವರ ಪರಿಚಯ ಆಯಿತು. ಪಂ. ಬಸವರಾಜ ಬೆಂಡಿಗೇರಿಯವರು ಆಗಿನ ತಬಲಾವಾದಕರಲ್ಲಿ ಅಗ್ರಗಣ್ಯರಾಗಿದ್ದರು. ಶ್ರೇಷ್ಠ ಸಂಗೀತಕಾರರಾದ ಪಂ. ಮಲ್ಲಿಕಾರ್ಜುನ ಮನ್ಸೂರ, ಪಂ. ಬಸವರಾಜ ರಾಜಗುರು, ಪಂ. ಗಜಾನನ ಬುವಾಜೋಷಿ ಹಾಗೂ ಅನೇಕ ದಿಗ್ಗಜ ಸಂಗೀತಗಾರರ ಜೊತೆಗೆ ತಬಲಾ ಸಾಥ ನೀಡಿದಂತಹ ಅತ್ಯಂತ ಶ್ರೇಷ್ಠ ತಬಲಾವಾದಕರು ಪಂ. ಬಸವರಾಜ ಬೆಂಡಿಗೇರಿಯವರು ಇವರು ಸಾಥ ಅಲ್ಲದೇ ಸೋಲವನ್ನು ನುಡಿಸುವದರಲ್ಲಿ ನಿಷ್ಣಾತರಾಗಿದ್ದರು.

ಇವರ ಬಗ್ಗೆ ನಡೆದ ಒಂದು ಘಟನೆ ಎಂದರೆ ಬೆಳಗಾಂವ ಆರ್ಟಸರ್ಕಲ್ಲಿನಲ್ಲಿ ಪಂ. ಗಜಾನನ ಬುವಾ ಜೋಷಿಯವರ ವಾಯಲಿನ ವಾದನ ಕಾರ್ಯಕ್ರಮ ಏರ್ಪಟ್ಟಿತ್ತು. ಅಲ್ಲಿ ಅಹಮದ ಜಾನ ತಿರಖ್ವಾ ತಬಲಾ ಸಾಥಿಗೆ ಬರಬೇಕಾಗಿತ್ತು. ಕಾರಣಾಂತರದಿಂದ ಅವರಿಗೆ ಬರಲಾಗಲಿಲ್ಲ. ಆ ಸ್ಥಾನವನ್ನು ತುಂಬಲು ಬಸವರಾಜ. ಬೆಂಡಿಗೇರಿಯವರನ್ನು ಅಹ್ವಾನಿಸಲಾಯಿತು. ಅದೇ ಪಂ. ಬಸವರಾಜ ಬೆಂಡಿಗೇರಿಯವರ ಮೊದಲನೆಯ ಕಾರ್ಯಕ್ರಮ. ಆಗ ಬೇಂಡಿಗೇರಿಯವರು ಸಾಥ ವದಗಿಸಲು ಬಂದರು. ಕಾರ್ಯಕ್ರವು ಪ್ರಾರಂಭವಾಯಿತು. ಪಂ. ಗಜಾನನ ಬುವಾ ಜೋಷಿಯವರು ವಾಯಲಿನ ನುಡಿಸಲು ಪ್ರಾರಂಭ ಮಾಡಿದರು. ಆಗ ಪಂ. ಬಸವರಾಜ ಬೆಂಡಿಗೇರಿಯವರು ವಾಯಲಿನ್ ಜೊತೆಗೆ ಸವಾಲ-ಜವಾಬ ನೀಡುತ್ತ. ಜನರಲ್ಲಿ ಬೆಂಡಿಗೇರಿಯವರು ಅಚ್ಚರಿಮೂಡಿಸಿದರು. ಈ ರೀತಿಯ ಒಂದು ಪವಾಡವೇ ಬೆಳಗಾವಿಯಲ್ಲಿ ನಡೆದು ಹೋಯಿತು. ಕಾರ್ಯಕ್ರಮ ಮುಗಿದನಂತರ ಪಂ. ಗಜಾನನ ಬುವಾ ಜೋಷಿಯವರು ಬೆಂಡಿಗೇರಿಯವರ ಬಗ್ಗೆ ಸಭೆಯನ್ನು ಉದ್ದೇಶಿಸಿ, ಪ್ರಶಂಸೆ ವ್ಯಕ್ತಪಡಿಸಿ "ಏ ತುಮ್ಹಾರೆ ಕರ್ನಾಟಕ ಕೆ ತಿರಖ್ವಾ" ಹೈ ಎಂದು ಉದ್ಗರಿಸಿದರು. ಮುಂದೆ ಪಂ. ಗಜಾನನರಾವ್ ಜೋಷಿಯವರು ಬೆಂಡಿಗೇರಿಯವರ ಕೈ ಚಳಕವನ್ನು ನೋಡಿ ಎಲ್ಲಾ ಕಡೆ ತಬಲಾ ಸಾಥಿಗೆ ಬೆಂಡಿಗೇರಿಯವರನ್ನೆ ಕರೆದುಕೊಂಡು ಹೋಗುತ್ತಿದ್ದರು. ಅಂಥವರ ಪಡನಾಟ ನನಗೆ ಲಭಿಸಿದ್ದು ಗುರು-ಹಿರಿಯರು ಆಶೀರ್ವಾದ ಎಂದು ಭಾವಿಸಿ ಪಂಡಿತ ಬಸವರಾಜ ಬೆಂಡಿಗೇರಿಯವರ ಬಗ್ಗೆ ನನಗೆ ತಿಳಿದಂತಹ ಕೆಲವು ವಿಷಯಗಳನ್ನು ಈ ಮೂಲಕ ತಿಳಿಸಿದ್ದೇನೆ.

## ೭. ಪಂ. ಗಜಾನನರಾವ ಆರ್. ನಿಂಬರಗಿ
## (ಖ್ಯಾತ ಹಿಂದುಸ್ತಾನಿ ವ್ಹಾಯಲಿನ್ ವಾದಕರು)

ಇವರು ಖ್ಯಾತ ತಬಲಾವಾದಕರಾದ ವಿದ್ವಾನ್ ಶ್ರೀ. ಬಿ. ಎಸ್. ಬೆಂಡಿಗೇರಿ ಅವರನ್ನು ಕುರಿತು ಬರೆದ ಲೇಖನ

ಹಿಂದುಸ್ತಾನಿ ಶ್ಯಾಸ್ತ್ರೀಯ ತಬಲಾವಾದನದಲ್ಲಿ ಪ್ರೊ. ಬಿ. ಎಸ್. ಬೆಂಡಿಗೇರಿ ಅವರು ಕರ್ನಾಟಕದ ಅಪ್ರತಿಮ ತಬಲಾವಾದಕರಾಗಿದ್ದರು. ಇವರು ಹಿಂದುಸ್ತಾನಿ ಗಾಯನ ಹಾಗೂ ವಾದನಕ್ಕೆರಡೂ ಅತ್ಯಂತ ಸುಂದರವಾಗಿ ಸಾಥ ಮಾಡುತ್ತಿದ್ದರು. ಆಕಾಶವಾಣಿಯ 'ಏ' ಗ್ರೇಡ್ ತಬಲಾವಾದಕರಾಗಿದ್ದ ಇವರು ಬಾನುಲಿ ಮತ್ತು ಹೊರಗಿನ ಸಂಗೀತ ಕಾರ್ಯಕ್ರಮಗಳಲ್ಲಿ ತಮ್ಮ ಅಮೋಘ ಸ್ವತಂತ್ರ ತಬಲಾವಾದನದಿಂದ ಸಂಗೀತ ಕ್ಷೇತ್ರವನ್ನು ಅತ್ಯಂತ ಉತ್ತುಂಗಕ್ಕೇರಿಸಿದರು. ಇವರು ದಿಲ್ಲಿ, ಪೂರಬ, ಬನಾರಸ ಬಾಜಗಳಲ್ಲಿ ಆಳವಾದ ತಬಲಾವಾದನದ ಅಧ್ಯಯನ ಮಾಡಿದ್ದರು. ತಬಲಾ ಸ್ವತಂತ್ರ ವಾದನಕ್ಕೆ ಅತ್ಯಂತ ಮಹತ್ವ ಕೊಟ್ಟ ಏಕೈಕ ಮಹಾ ಕಲಾವಿದ. ಇವರು ಪ್ರತಿಯೊಂದು ಕಾರ್ಯಕ್ರಮದಲ್ಲಿಯೂ ತಮ್ಮ ಅಮೋಘ ಸಾಥ ಮಾಡುವ ಶೈಲಿಯಿಂದ ಶ್ರೋತೃಗಳ ಮನ ಗೆಲ್ಲುವಂತೆ ಮಾಡುತ್ತಿದ್ದರು.

ಬೆಳಗಾಂವದ ಶಹಾಪುರದಲ್ಲಿ ಬಹಳಷ್ಟು ವರುಷಗಳ ವರೆಗೆ ವಾಸಮಾಡಿದ್ದ ಇವರು ಆಗಿನ ಕಾಲದಲ್ಲಿನ ದೇಶದ ಅನೇಕ ಪ್ರಮುಖ ಗಾಯಕರು ಹಾಗೂ ವಾದಕರಿಗೆ ತಮ್ಮ ತಬಲಾ ಸಾಥ ನೀಡಿ ಶ್ರೇಷ್ಠ ತಬಲಾವಾದಕರೆಂದು ಪ್ರಸಿದ್ಧರಾಗಿದ್ದರು. ಪ್ರಮುಖ ಗಾಯಕರಾದ ವಿ.ಎ.ಕಾಗಲಕರ, ರೋಶನ ಅಲಿ, ಪಂ.ವಝೆ ಬುವಾ, ಹನುಮಂತರಾವ ವಾಳ್ವೇಕರ, ಪಂ. ಗಜಾನನರಾವ ಜೋಶಿ ಬುವಾ, ಡಾ. ಮಲ್ಲಿಕಾರ್ಜುನ ಮನಸೂರ, ಪಂ. ಬಸವರಾಜ ರಾಜಗುರು ಇತ್ಯಾದಿ ಹಿರಿಯ ಕಲಾವಿದರ ಜೊತೆಗೆ ಸಾಥ ಮಾಡುತ್ತಿದ್ದರು. ಕೃಷ್ಣಾ ಪಂಡಿತ, ಸರಸ್ವತಿ ರಾಣೆ, ಕೇಸರಬಾಯಿ ಕೇರಕರ, ಶ್ರೀಮತಿ ಕೌಶಲ್ಯ ಮಂಜೇಶ್ವರ, ಶ್ರೀಮತಿ ಜಯಶ್ರೀ ಪಾಟ್ಣೇಕರ, ಶ್ರೀಮತಿ ಬಾಯಿನಾರ್ವೇಕರ, ಡಾ. ಗಂಗೂಬಾಯಿ ಹಾನಗಲ್ಲ, ರೋಶನಾರಾ ಬೇಗಂ ಮುಂತಾದವರೊಂದಿಗೂ ಇವರು ಸಾಥ ಮಾಡಿದ್ದರು.

೧೯೪೦ನೇ ಇಸ್ವಿಯಿಂದ ಮಹಾರಾಷ್ಟ್ರದ ಸಾತಾರಾ ಜಿಲ್ಲೆಯ ಔಂಧ ಎಂಬ ಊರಿನಲ್ಲಿ ಪ್ರತಿ ವರ್ಷ ಜರುಗುತ್ತಿದ್ದ ದತ್ತಾತ್ರೇಯ ಮಹೋತ್ಸವದ ಅಂಗವಾಗಿ ಮೂರು ದಿನಗಳ ಸಂಗೀತ ಕಾರ್ಯಕ್ರಮಗಳಲ್ಲಿ ಇವರು ಭಾಗವಹಿಸುತ್ತಿದ್ದರು. ಆಗ ಅಲ್ಲಿ ಪಂ. ಗಜಾನನರಾವ ಜೋಶಿ ಬುವಾ, ಹಾಗೂ ಪಂ. ಅನಂತ ಮ. ಜೋಶಿ ಅವರ ನೇತೃತ್ವದಲ್ಲಿ ಸಂಗೀತ ಕಾರ್ಯಕ್ರಮ ನಡೆಯುತ್ತಿತ್ತು. ಅಲ್ಲಿ ದೇಶದ ಅನೇಕ ಪ್ರಮುಖ ಗಾಯಕರು-ವಾದಕರು ಬರುತ್ತಿದ್ದರು.

ಅಲ್ಲಿಯೂ ಕೂಡಾ ಶ್ರೀ ಬಿ. ಎಸ್. ಬೆಂಡಿಗೇರಿ ಅವರು ತಮ್ಮ ತಬಲಾ ಸಾಥ ನೀಡಿ ಶ್ರೇಷ್ಠ ತಬಲಾವಾದಕರೆಂದು ಕಲಾವಿದರ ಮನೆಮಾತಾಗಿದ್ದರು. ಅವರು ಸಾಥ ನೀಡಿದ ಅನೇಕ ಹಿರಿಯ ಕಲಾವಿದರೆಂದರೆ ಉಸ್ತಾದ ವಿಲಾಯತ ಖಾನ, ಪಂ. ಅನಂತ ಮ. ಜೋಶಿ, ಶ್ರೀಮತಿ ಬನಾರಸಬಾಯಿ, ಪಂ. ಸುನೀಲ ಅಠೋಣಕರ, ಪಂ. ಶ್ರೀಧರ ಪಾರ್ಸೇಕರ, ಪಂ. ಪಂಚಾಕ್ಷರಿ ಮತ್ತಿಗಟ್ಟಿ ಮುಂತಾದವರು.

ಶ್ರೀಯುತ ಬೆಂಡಿಗೇರಿ ಅವರು ತಮ್ಮ ಸ್ವತಂತ್ರ ತಬಲಾವಾದನದಲ್ಲಿ ಯಾವಾಗಲೂ ಘರಾಣೆಯ ಪದ್ಧತಿಯ ಪ್ರಕಾರ ಅತ್ಯಂತ ಸುಮಧುರವಾಗಿ ತಬಲಾ ನುಡಿಸುತ್ತಿದ್ದರು. ಶ್ರೇಷ್ಠ ಗಾಯಕರ ಗಾಯಕಿ ಅಂಗವನ್ನು ಮತ್ತು ವಾದಕರ ವಾದ್ಯದ ಗುಣಧರ್ಮವನ್ನು ತಿಳಿದುಕೊಂಡು ತಬಲಾ ನುಡಿಸುವ ಸಾಮರ್ಥ್ಯವನ್ನು ಹೊಂದಿದ್ದರು.

ಪ್ರೊ. ಬಿ. ಎಸ್. ಬೆಂಡಿಗೇರಿ ಅವರು ತಬಲಾ ಸ್ವತಂತ್ರ ವಾದನ ಕಾರ್ಯಕ್ರಮಗಳಲ್ಲಿ ಆಕಾಶವಾಣಿಯಲ್ಲಿ ನಾನು (ಪಂ. ಜಿ. ಆರ್. ನಿಂಬರಗಿ) ಅವರಿಗೆ ವಾಯಲಿನ್ ಲೆಹರಾ ಸಾಥ ನೀಡುತ್ತಿದ್ದೆನು ಅಲ್ಲದೆ ಇವರ ತಬಲಾ ಕಾರ್ಯಕ್ರಮಗಳು ಕೊಲ್ಹಾಪುರ, ಬೆಳಗಾಂವ, ಸಾಂಗ್ಲಿ ಮೀರಜ, ಗದಗ, ಮುಂಬೈ ಔರಂಗವಾದ ನಾಗಪುರ ಇತ್ಯಾದಿ ಸ್ಥಳಗಳಲ್ಲಿ ಜರುಗಿದ್ದವು. ಸುಮಾರು ೧೯೭೦ ರಿಂದ ೧೯೭೨ರ ಅವಧಿಯಲ್ಲಿ ಮಹಾರಾಷ್ಟ್ರ ಮಂಡಳಿಯ ಕರ್ನಾಟಕ ಭಾಗದಲ್ಲಿ ನಡೆಯುವ ಎಲ್ಲಾ ಸಂಗೀತ ಈ ಕಾರ್ಯಕ್ರಮಗಳಲ್ಲಿ ಪ್ರೊ. ಬಿ. ಎಸ್. ಬೆಂಡಿಗೇರಿ ಅವರು ತಬಲಾ ಸಾಥ ನೀಡುತ್ತಿದ್ದರು. ಈ ಮಂಡಳಿಯ ಕಾರ್ಯಕ್ರಮಗಳು ಎಲ್ಲಿಯೇ ನಡೆಯಲಿ ಅಲ್ಲಿ ಅವರನ್ನು ಚಾಚೂ ತಪ್ಪದೇ ತಬಲಾ ಸಾಥಗಾಗಿ ಹಾಗೂ ಸ್ವತಂತ್ರ ವಾದನಕ್ಕಾಗಿ ಆಹ್ವಾನಿಸುತ್ತಿದ್ದರು.

ನಮ್ಮ ಗುರುಗಳಾದ ಪಂ. ಗಜಾನನರಾವ ಜೋಶಿ ಬುವಾ ಅವರ ಕಾರ್ಯಕ್ರಮಗಳು ಕರ್ನಾಟಕದಲ್ಲಿ ಎಲ್ಲಿಯೇ ನಡೆಯಲಿ, ಅಲ್ಲಿ ಪಂ. ಬೆಂಡಿಗೇರಿ ಅವರೇ ಸಾಥ ನೀಡಬೇಕೆಂದು ಪಂ. ಗಜಾನನರಾವ ಜೋಶಿ ಬುವಾ ಅವರು ಬಯಸುತ್ತಿದ್ದರು ಮತ್ತು ಅವರೊಂದಿಗೆ ಬೆಂಡಿಗೇರಿ ಅವರೂ ಸಹ ಅಷ್ಟೇ ಸುಸಂಗತವಾಗಿ ಸಾಥ ಮಾಡುತ್ತಿದ್ದರು.

೧೯೫೮ ರಿಂದ ೧೯೭೩ರ ವರೆಗೆ ಪಂ. ಗಜಾನನ ಬುವಾ ಜೋಶಿ ಅವರು ಭಾರತದ ಆಕಾಶವಾಣಿಯ ಸಲಹಾಕಾರರಾಗಿ ಕಾರ್ಯ ನಿರ್ವಹಿಸುತ್ತಿದ್ದರು. ಆಗ ಪ್ರತಿ ವರುಷದ ಮೂರು ತಿಂಗಳುಗಳ ಕಾಲ ಧಾರವಾಡದಲ್ಲಿ ನಮ್ಮ ಮನೆಯಲ್ಲಿಯೇ (ಪಂ.ಜಿ.ಆರ್.ನಿಂಬರಗಿ) ಪಂ. ಗಜಾನನಬುವಾ ಜೋಶಿ ಅವರು ವಾಸಿಸುತ್ತಿದ್ದರು. ಪ್ರತಿನಿತ್ಯವೂ ಬುವಾ ಅವರ ಗಾಯನ ಹಾಗೂ ವಾಯಲಿನ್‌ವಾದನದ ರಿಯಾಜ್ ನಡೆಯುತ್ತಿತ್ತು. ಆ ವೇಳೆಯಲ್ಲಿ ಪಂ. ಬೆಂಡಿಗೇರಿ ಅವರು ತಪ್ಪದೇ ಪ್ರತಿದಿನ ಮಧ್ಯಾಹ್ನ ೪ ಗಂಟೆಯಿಂದ ರಾತ್ರಿ ೧೦ ಗಂಟೆಯ ವರೆಗೆ ಪಂ.ಗಜಾನನಬುವಾ

ಅವರ ಜೊತೆಗೆ ರಿಯಾಜ್‌ನಲ್ಲಿ ತಬಲಾ ನುಡಿಸುತ್ತಿದ್ದರು. ಧಾರವಾಡ ಆಕಾಶವಾಣಿಯ ರಿಕಾರ್ಡಿಂಗ್‌ನಲ್ಲಿ ಪಂ. ಗಜಾನನಬುವಾ ಅವರ ವಾಯಲಿನ್ ವಾದನಕ್ಕೆ ಶ್ರೀ. ಬಿ. ಎಸ್. ಬೆಂಡಿಗೇರಿ ಅವರೇ ಹೆಚ್ಚಾಗಿ ನುಡಿಸುತ್ತಿದ್ದರು.

ಶ್ರೀಯುತ ಬೆಂಡಿಗೇರಿ ಅವರು ಅನೇಕ ಶಿಷ್ಯಂದಿರನ್ನು ತಯಾರು ಮಾಡಿರುವರು. ಅದೂ ಅಲ್ಲದೆ ಅತ್ಯಂತ ಒಳ್ಳೆಯ ತಬಲಾ ಶಿಕ್ಷಕರಾಗಿದ್ದರು.

## ೮. ಪಂ. ಶೇಷಗಿರಿ ಹಾನಗಲ್ (ತಬಲಾವಾದಕರು) :

ಬಸವರಾಜ ಬೆಂಡಿಗೇರಿ ಬಹಳ ಸರಳ ಸ್ವಭಾವದ ವ್ಯಕ್ತಿಯಾಗಿದ್ದರು. ಇವರಿಗೆ ನೆನಪಿನ ಶಕ್ತಿ ಬಹಳವಿತ್ತು. ಅಂದರೆ ಗುರುಗಳು ಪಾಠ ಮಾಡಿದ ಎಲ್ಲಾ ತಬಲಾ ಬೋಲುಗಳು ಸರಿಯಾಗಿ ನೆನಪಿದ್ದವು. ನಾನು ಮತ್ತು ಅವರು ಯಾವಾಗೂ ಪ್ರೀತಿಯಿಂದ ಇರ್ತಿದ್ವಿ. ನಾನು ಕಲಿತ ಕೆಲವೊಂದು ಬೋಲುಗಳನ್ನು ಅಂದರೆ ಲಾಲಜಿ ಗೊಖಲೇಯವರ ಕಡೆ ಕಲಿತ ಬೋಲುಗಳನ್ನು ಬಸವರಾಜರಿಗೆ ಹೇಳುತ್ತಿದ್ದೆ ಮತ್ತು ಅವರು ಕಲಿತ ಬೋಲುಗಳನ್ನು ನನಗೆ ಹೇಳುತ್ತಿದ್ದರು. ಹೀಗೆ ನಾವಿಬ್ಬರೂ ಪರಸ್ಪರ ಪ್ರೀತಿಯಿಂದ ಒಬ್ಬರಿಗೊಬ್ಬರು ಕಾಣುತ್ತಿದ್ವಿ. ಒಂದು ಸಲ ಹಿಂಗಾಯ್ತು ಸವಾಯಿ ಗಂಧರ್ವ ಪುಣ್ಯತಿಥಿ ಕುಂದುಗೋಳನ್ಯಾಗ ನಡಿತ್ಯೆತಿ. ಅಲ್ಲಿ ಮೂರ ದಿನದ ಕಾರ್ಯಕ್ರಮವಿತ್ತು. ಅಲ್ಲಿ ಮೊದಲನೇ ದಿನ ನಾನು ತಬಲಾ ಸೋಲೊ ನುಡಿಸಿದೆ. ನಂತರ ಎರಡನೇ ದಿನ ಜನರೆಲ್ಲ ಕೂಡಿ ಬಸವರಾಜರಿಗೆ ಮತ್ತು ನನಗೆ ತಬಲಾ ಸೋಲೊ ಜುಗಲಬಂದಿ ನುಡಿಸಲು ಹೇಳಿದ್ರು. ಆಗ ಜನರ ಒಂದು ಇಚ್ಛೆಯ ಮೇರೆಗೆ ನಾವಿಬ್ಬರೂ ತಬಲಾ ಸೋಲೊ ನುಡಿಸಿದ್ವಿ. ಆ ಕಾರ್ಯಕ್ರಮ ಬಹಳ ಚೆನ್ನಾಗಿತ್ತು. ಜನರೆಲ್ಲರು ಸಂತೋಷದಿಂದ ತೂಗಾಡಾಕತ್ರು. ಹಿಂಗ ಮುಂದ ಅದು ಪೇಪರನಲ್ಲಿಯೂ ಬಂತು.

ಬಸವರಾಜರು ಸಾಥ-ಸಂಗತವನ್ನು ಕೂಡಾ ಛಲೋ ಮಾಡ್ತಿದ್ರು ಅಂದರ ಪ್ರತಿ ಯೊಬ್ಬರ ಹಾಡಿನವರ ಹಾಗೂ ವಾದ್ಯ ಸಂಗೀತಗಾರರ ಲಯ ಕೊಡುವ ಪದ್ಧತಿ ಬೇರೆ ಬೇರೆಯಾಗಿರುತ್ತೆ. ಬೇಕಾದ ಲಯವಿರಲಿ ಆ ಲಯ ಬಸವರಾಜರು ಹಿಡಿದ ಬಿಡುತ್ತಿದ್ರು ಅಂದರ ಅಷ್ಟು ಲಯಕ್ಕೆ ಗಟ್ಟಿ ಬಸವರಾಜರು ಇದ್ದರು.

## ೯. ಪಂ. ವಸಂತ ಕನಕಾಪೂರ (ಹಾರ್ಮೋನಿಯಂ ವಾದಕರು):

ದಿ. ತಬಲಾ ವಿದ್ವಾಂಸರಾದಂತಹ ಬಸವರಾಜ ಬೆಂಡಿಗೇರಿ ಇವರ ಬಗ್ಗೆ ನನಗೆ ಹೇಳಬೇಕೆಂದ್ರ ಅವರದೂ ನಮ್ಮದೂ ಸಂಪರ್ಕ ೧೯೬೪ ರಿಂದ ಬಂದೈತಿ.೬೪ ರಿಂದ ಅವರ ಕೊನೆಯವರೆಗನೂ ನಾನು ಅವರ ಜೊತೆ ಸಾಕಷ್ಟು ಸಾಥ-ಸಂಗತ ನಾ ಮಾಡೇನಿ. ಸಾಥ-ಸಂಗತ ದೃಷ್ಟಿಯಿಂದ ನಾನೂ ಆವರೂ ಮತ್ತು ಬಸವರಾಜ ರಾಜಗುರು ಅವರು ಮೂರು ಮಂದಿ ನಾವು ಇಡೀ ಹಿಂದೂಸ್ತಾನ ತುಂಬಾ ಸಾಕಷ್ಟ ಸಲ ಟೂರ ಮಾಡೇವಿ ಕಾರ್ಯಕ್ರಮ ಕೊಟ್ಟೇವಿ. ಅವರ ಸಾಥ-ಸಂಗತ ಬಗ್ಗೆ ಹೇಳಬೇಕಂದ್ರ ಇನ್ಸಟ್ರುಮೆಂಟಲ್ ಸಾಥಗೆ ನಿಷ್ಣಾತರಾಗಿದ್ದರು. ಹಂಗೇನೇ ಹಾಡನ ಸಂಗತನೂ ಅಷ್ಟೇ  ನಿಷ್ಣಾತ ರೀತಿಯಿಂದ ಸಾಥಿ ಮಾಡತಿದ್ರು .ಅಂದರ ಕಿರಾಣಾ ಘರಾಣಾದವರ ಹಾಡಿದ್ರ, ಕಿರಾಣಾ ಘರಾಣಾ ಸ್ಟೈಲ್‌ನಿಂದನ ಅವರ ಸಾಥ-ಸಂಗತ ಹೆಂಗ ಇರಬೇಕಂಬೂ ದೃಷ್ಟಿಯಿಂದ ಅವರು ಸಾಥ-ಸಂಗತ ಮಾಡತಿದ್ರು. ಜೈಯಪೂರ ಇತ್ತಪ್ಪಾ ಅಂದ್ರ ಅವರ ಜತಿ ಬಡತ-ಜೈಪೂರದವರ ಹೆಂಗ ಬಡತ ಇರ್ತದ ಅವರದ ಹೆಂಗ ಲಯಕಾರಿ ಇರತದ, ಹೆಂಗ ತಾನಬಾಜೀ ಇರತದ ಆ ತಾನಬಾಜೀ  ಅಂಗದಿಂದನ ಅವರ ಸಾಥ-ಸಂಗತ ಮಾಡತಿದ್ರು. ಒಟ್ಟಿಂದ ಗಾಯಕರ ಜೊತಿ ಜೊತೀನ ಅವರ ಬಾರಸಿಗೊಂತ ಹೋಗತಿದ್ರು. ಗಾಯಕರ ಮುಂದು ಹೋಗತ್ತಿದ್ದಿಲ್ಲ ಅವರ ಹಿಂದನೂ  ಉಳಿತಿದ್ದಿಲ್ಲ. ಅವರ ಜತೀಲಿ ಸರಿಸಮಾನವಾಗಿ ಅವರ ಜೊತೀನ ಬಾರಿಸಿಗೋತ ಹೋಗತಿದ್ರು. ಹೀಗಾಗಿ ಗಾಣೇ ರಂಗಾಯಸ್ತಿತ್ತು.  ಅವರ ಸಾಥಿ ಇತ್ತಪಾಂದ್ರೆ ಎಂಥಾವಾದರೂ ಅವರ ಗಾಯಕಿ ಭಯಂಕರ ರಂಗಾಯಸ್ತಿತ್ತು. ಇಷ್ಟೆ ಅಲ್ಲ ಗಾಯಕರಿಗೆ ಅವರು  ಒಂದು ಮಾರ್ಗದರ್ಶಕರಾಗಿ ಅವರು ಸಾಥಿ ಮಾಡತಿದ್ರ ಹೇಂಗ ಅಂದ್ರ ಯಾವದೊ ಒಂದು "ನಾಯಕಿ ಕನಡಾ" ದೊಳಗ ಒಂದ ಚೀಜ ಹಾಡಿತಿದ್ರಪಾ ಅದರೊಳಗೊಂದೆನೋ  ಒಂದು ಅಂತರಾ ಮರತಿದ್ರ ಅವರು ಹೇಳತಿದ್ರು. ಇಲ್ಲಾ  ಅದು ಹಿಂಗ ಅದ ಇಲ್ಲಿ ಅಂತರಾ ನೀವು ಹೀಂಗ ಅಂಬೂದು ತಪ್ಪು ಹಿಂಗ ಹೇಳ್ರಿ ಅಂತ ಹೇಳಿ ಬಾಯಲೆ ಸನ್ನೆ ಮಾಡ್ತಿದ್ರು. ಎಲ್ಲಾ ಗಾಯಕರಿಗೆ ಚೀಜಾ ಬಾಯಪಟ ಹೇಳಬೇಕು ಇಲ್ಲಾದ್ರ ಮರೀತಾವ.  ಅದನ ನೆನಪ ಮಾಡಿಕೊಡುವವರು ಬಸವರಾಜ ಬೆಂಡಿಗೇರಿ.

ಸಂದರ್ಶಕರು : ಅಷ್ಟ ರಾಗ-ರಾಗಿಣಿಗಳ  ಬಗ್ಗೆ ಅವರಿಗೆ ಜ್ಞಾನ ಇತ್ತು.

ಕನಕಾಪೂರ ಅವರು : ಹಾ ! ಅವರಿಗೆ ರಾಗ- ರಾಗಿಣೆಗಳ ಬಗ್ಗೆ ಮಾಹಿತಿ ಇತ್ತು ಚೀಜ ಸಾಕಷ್ಟು ಬಾಯಪಾಠ ಇತ್ತು. ಒಂದೊಂದು ರಾಗದಾಗ ಮೂರಮೂರ ಚೀಜ ಇತ್ತಂದ್ರ ಅವು ಬಾಯಪಾಠ ಇರತಿತ್ತು. ಅಂದರ ಸಾಧಾರಣ ಗಾಯಕಿ ಅಂದರೇನು ಎಲ್ಲಾ ಸಂಪೂರ್ಣ ಅವರಿಗೆ ಗೊತ್ತಿತ್ತು.

ಮತ್ತೆ ಗ್ವಾಲ್ಹೇರ ಗಾಯಕಿ ಅಂದ್ರೇನು? ಅದು ಯಾವ ಸ್ಟಾೖಲ್ನಿಂದ ಹಾಡಬೇಕು. ಒಮ್ಮೊಮ್ಮೆ ಜೈಪುರ ಗಾಯಕಿ ಅಂದರೇನು ಆ ಮ್ಯಾಲೆ ನಿಮ್ದು ಆಗ್ರಾ ಘರಾನೇ ಗಾಯಕಿ ಸಂಗತಿ ಹೆಂಗ ಸಾಥ ಕೊಡಬೇಕು. ಆ ಲಯಕಾರಿ ಹೆಂಗ ಇರತದ ಎಲ್ಲಾದರದೂ ಒಂದ ಅಂದಾಜಿತ್ತು. ಹಿಂಗಾಗಿ ಆಯಾ ಘರಾಣೆ ಸಂಗತೀಲಿ ಗಾಯಕರ ಸಂಗತಿ ಸಾಥ ಮಾಡಬೇಕಾದ್ರ, ಅದೇ ಘರಾಣಾದ ಗಾಯಕಿ ಅಂಗವಾಗಿ ಇವರು ತಬ್ಲಾ ನುಡಿಸತಿದ್ರು. ಹಿಂಗಾಗಿ ಅದು ಒಂದು ಪರಿಪೂರ್ಣ ಗಾಯಕಿ ಅನಸಿಗೊಳತಿ ತ್ತು. ಯಾರऽ ರಾಜಗುರು ಬಸವರಾಜ ಬೆಂಡಿಗೇರಿಯವರ ಸಾಥ ಇತ್ತಪಾ ತಬಲಾಕಂದರ ಅದು ಪರಿಪೂರ್ಣ ಗಾಯಕಿ ಅನಸತಿತ್ತು ಯಾಕಂದರ ಅವರ ಸಾಥ ಗಾಯನ ಸಂಗತಿ ಒಂದಾಗಿ ಹೋಗಿ ಬಿಡತಿದ್ರು. ಆಯಾ ಪದ್ಧತಿ ಅನುಸಾರವಾಗಿ ಹೋಗಿಬಿಡತಿದ್ರು ಮತ್ತ ಗಾಯಕರಿಗೆ ಮಾರ್ಗದರ್ಶನ ಮಾಡಕೋತ ಅವರಿಗೊಂದು ಚೀಜ ಮರತ ಹೋದರ ಅವರಿಗೆ ನೆನಪ ಮಾಡಿಕೋತ ಅವರಿಗೆ ಇಂಥಾದ ಅಂತ್ರಾ ಹ್ಯಾಂಗೈ ತಿ. ಈ ರಾಗದೊಳಗೆ ಅವರು ಈ ಚೀಜ ಹಾಡತೇನಂದ್ರ ಬ್ಯಾಡಾ ಇದರಕಿಂತ ಈ ಚೀಜ ಹಾಡರಿ ಅವರಿಗೆ ಅದನ್ನ ಹೇಳತಿದ್ರು ಡಿಕ್ಟೋಟ ಮಾಡತಿದ್ರು ಅಷ್ಟೊಂದು ಒಂದು ಆಥಾರಟೇಟಿವಲಿ ಮಾತಾಡೊ ತಬಲಜಿ ಅಂದರ ಇಡೀ ಹಿಂದುಸ್ತಾನಕ ನನಗ ಅನಸಿದ ಮಟ್ಟಿಗೆ ಇವರೇ ಒಬ್ಬರು ಮತ್ತ ಇವರು ಅಂದಂಗ ಎಲ್ಲಾ ಗಾಯಕರು ಅವರನ ಮಾನಸ್ತಿದ್ರು. ಅವರ ಹೇಳಿದಂಗ'' ಹಾ ಬಸವಣ್ಣೆ ಹಂಗ ಆಗಲಿ'' ಅಂತಿದ್ರು. ಅವರ ಹೇಂಗ ಹೇಳತಾರ ಹಂಗ ಬರೋಬರ ಅವರ ಸಂಗತೀಲೆನೂ ಹೂ ಅಂತ ಹೇಳಿ ಅನಕೊಂಡು ಅವರು ಹಾಡತಿದ್ರು ಅಷ್ಟೊಂದು ಅವರಿಗೆ ಒಂದು ಸ್ನೇಹ ದೃ ಷ್ಟಿಯಿಂದ ಎಲ್ಲರ ಸಂಗತೀಲೆ ಸ್ನೇಹಮಯವಾಗಿ ನಡಕೊಂಡ್ರು. ಅವರು ಒಳ್ಳೆ ರಂಗಮಯವಾಗಿ ಸಾಥ ಮಾಡತಿದ್ರು.

ಯಾರ ಸಂಗತೀಲೆ ವೈ ಮನಸಂಬೂದು ಇದ್ದಿದ್ದೇ ಇಲ್ಲಾ ಎಲ್ಲಾರ ಸಂಗತಿಲೇ ಫ್ರೆಂಡಶಿಪ್ಪ ಇತ್ತವರಿಗೆ. ಮೊದಲ ರಾಜಗುರು ಸಂಗತೀಲೆ ಒಡನಾಟ ಜಾಸ್ತಿ ಇತ್ತು. ಆಮ್ಯಾಲೆ ಕೆಲದಿವಸಾದ ಮ್ಯಾಲೆ ಮನಸೂರವರ ಸಂಗತೀಲೆ ಜಾಸ್ತಿ ಹೋಗಾಕ ಹತ್ತಿದ್ರು. ಎಲ್ಲಾ ಇಂಥವರ ಜೊತೀಲಿ ಹೋಗಬಾರದೂ ಅಂತೆಲ್ಲಾ ಏನಿಲ್ಲಾ. ಇಲ್ಲೆಂಕರ ನಿಸಾರಹುಸೇನ, ಶರಫತ ಹುಸೇನ, ಹಜರತ ಹುಸೇನಖಾನ ಸಾಬರು ಇನ್ನು ಎಷ್ಟೆಷ್ಟೋ ನಮ್ಮ ಆಕಾಶವಾಣಿಲಿ ೧೯೭೫ ನಂದ ಆಪಾಯಿಂಟ. ಆದನಂತರ ಎಷ್ಟೇಷ್ಟ ದೊಡ್ಡ ದೊಡ್ಡ ಗವಾಯಿಗಳು ಬಂದಾರ ಅವರ ಸಂಗತಿ ಏನ ಎಲ್ಲಾ ಸಂಗತೀನೂ ಬಾರಸತಿದ್ರು. ನಾ ನೋಡೇನಿ ಎಲ್ಲಾರ ಸಂಗತೀನೂ ಅಷ್ಟೇ ಸಖ್ಯದಿಂದ ಅಷ್ಟೇ ಫ್ರೆಂಡಶಿಪನಿಂದ ಅವರು ಬಾರಿಸಿಗೊಂಡು ಅವರುಕಾರ್ಯಕ್ರಮಾ ಸಕ್ಸೆಸ್‌ಫುಲ್ ಮಾಡತಿದ್ರು ಮತ್ತ ಅವರೆಷ್ಟು ತಬಲಾ ವಿದ್ವಾಂಸರಿದ್ರು ಅಷ್ಟ ಮಾತನಲ್ಲೂ ಸಹಿತ ಜಾಣರಿದ್ರು. ಸಮಯೋಚಿತವಾಗಿ

ಬಹಳ ಚಂದ ಮಾತಾಡತಿದ್ರು ಎಲ್ಲಾರ್ನ ನಗಸ್ತಿದ್ರು ಅವರ ಸಂಗತಿಲೆ ಹೊಂದಕೊಂಡು ಅವರ ಜೊತಿ ಕಾರ್ಯಕ್ರಮಕ ಹೋದ್ರ ಲೈವ್ಲಿ ಇದ್ದಂಗಿರತಿತ್ತು. ಅವರಷ್ಟಕ್ಕ ಅವರಿರತಿದ್ದಿಲ್ಲ ನಾವೆಲ್ಲಾರ ಕೂಡೇ ಇರತಿದ್ವಿ, ಎಲ್ಲಾರ ಕೂಡೆ ಥಾಂದ್ಲೆ ಹಾಕತಿದ್ವಿ, ಎಲ್ಲಾರು ಕೂಡೇ ತಿಂತಿದ್ವಿ ಉಣತಿದ್ವಿ ಹಿಂಗಾಗಿ ಎಲ್ಲಾರ ಕಡೆ ಹೊಂದಿಕೊಂಡು ಸಣ್ಣವರು ದೊಡ್ಡವರು ಅಂತ ಏನು ಇಲ್ಲೇ ಇಲ್ಲ ಎಲ್ಲಾರು ಒಂದು ಅಂಬು ಇಂಟಿಗ್ರಿಟಿ ಭಾವನೆ ಇತ್ತವರಲ್ಲಿ. ಯಾವ ಸಣ್ಣ ಗಾಯಕರ ಜೊತೇಲೂ ಅಷ್ಟೇ ಸಖ್ಯದಿಂದ ನಡೇತಿದ್ರು. ದೊಡ್ಡ ಗವಾಯಿ ಸಂಗತಿ ಸಹಿತ ಅವರ ಸಮಾ ಅವರ ಲೆವಲ್ಲಿಗೆ ತಕ್ಕ ಅವರ ಜೊತೇಲೆ ಅವರಿಗೆ ಹೆಂಗಬೇಕು ಆಥರದ್ದು ಮಾತಾಡತಿದ್ದರವರು. ವಿದ್ವತ್ಪೂರ್ಣ ಮಾತನೂ ಆಡತಿದ್ರು ಸಣ್ಣ ಹುಡಗರ ಸಂಗತಿ ಸಣ್ಣ ಹುಡುಗರಂಗನೂ ಮಾತಾಡತಿದ್ರು ಯಾಕಂದ್ರ ಆವಾಗ ಆಕಾಶವಾಣಿಗೆ ಎಷ್ಟೋ ಸರ್ತೆ ಗಿಳಿವಿಂಡ ಕಾರ್ಯಕ್ರಮಕ್ಕೆ ಬಾರಸ್ಯಾರ. ಸಣ್ಣ ಮಕ್ಕಳ ಕಾರ್ಯಕ್ರಮಕ್ಕ ಅವರಂಗನ  ಚಂದಾಗಿ ಬಾರಿಸಿ ಅವರಿಗೆ ತಿಳಿಯೂವಂಗ ಟೇಕಾ ಬಾರಸತಿದ್ರು. ಆ ಮ್ಯಾಲೆ ಯುವವಾಣಿಯವರ ಬಂದರಿಲ್ಲೊ ಅವರ ಯೋಗ್ಯತೆಗೆ ತಕ್ಕಂಗ ಬಾರಿಸಿ ಅವರ ಕಾರ್ಯಕ್ರಮ ರಂಗ ಮಾಡತಿದ್ರು. ಆಮ್ಯಾಲೆ ಕ್ಲಾಸಿಕಲ್‌ದವರು ''ಬಿ ಹೈ '' ದವರು ಬಂದರು ಅವರ ತಕ್ಕ  ವಿದ್ವತ್ಪೂರ್ಣ ಬಾರಸ್ತಿದ್ರು. ''ಎ'' ಗ್ರೇಡದವರ ಬಂದ್ರಿಲ್ಲೊ ಅವರ ಸಂಗತೀಲೆ ಏನ ಕುಸ್ತಿ ಹಿಡಿಬೇಕೋ ಹಿಡಿತಿದ್ರು ''ಟಾಪ'' ಗ್ರೇಡ ಹೊರಗಿನ ಆರ್ಟಿಸ್ಟ ಬಂದ್ರಿಲ್ಲೊ ಅವರ ಜೊತೀಲೆ ಅಗದಿ ಸರಿಸಮಾ ಅವರ ಈಕ್ವಲ್ ಬಾರಿಸಿ ಅವರ ಜೊತಿಜೊತೀಲೇನ ಬಾರಿಸಿ ಅವರ ಕಡಿಂದ ಹೌದ ಅನಿಸಿಕೋತಿದ್ರು. ಅವರ ಗಾಣೆ ಅಷ್ಟೊಂದು ರಾಂಗಾಯಿಸಿ ಹೋಗಿಬಿಡತಿತ್ತು. ಅಷ್ಟ ವಿದ್ವತಪೂರ್ಣ ಬಾರಸೂದು ಅವರ ವಾದನಂದರ ವಿದ್ವತಪೂರ್ಣ ವಾದನ. ಈ ಠುಮ್ರಿ ಹಾಡವರ ಬರತಿದ್ರು ಲೈಟ, ಟಿಪ್ಪಾ ಮ್ಯೂಜಿಕನವರ ಬರತಿದ್ರು, ಅವರ ಸಂಗತೀಲೆ ಸಹಿತ ಅಷ್ಟೆ ವೆರಾಯಿಟಿ ಮಾಡಿ ಲೈಟ ಮ್ಯೂಜಿಕ ಸ್ಟೈಲ್ ಅಷ್ಟ ಚಂದ ತಬಲಾ ಬಾರಸ್ತಿದ್ರು. ಠುಮರಿಯವರು ಬಂದಾಗ ನಿರ್ಮಲಾ ಅರುಣರವರನ ನಾವು ಇಲ್ಲೆ ಆಕಾಶವಾಣಿಯವರ ಕರೆಸಿ ಕಾರ್ಯಕ್ರಮ ಮಾಡಿಸಿದರ ಅವರS ತಬಲಾ ಸಾಥಿಗೆ ಇರತಿದ್ರು ಆಗ ಅವರ ಸಂಗತೀಲೆ  ಬನಾರಸೀ ಢಂಗದಿಂದ ಹೆಂಗ ಬಾರಿಸಬೇಕೋ ಅಷ್ಟ ಚಂದ ಬನಾರಸಿ ಢಂಗದಿಂದ ಅವರ ಸಂಗತಿ ಠುಮರೀ ಬಾರಸತಿದ್ರು. ಲಗ್ಗಿ, ಲಡಿ ಅಂದರ ಅಗದಿ ಆಚೀ ಕಡೆಯವರು ಜಕ್ಕ ಹೊಡಸಬೇಕು ಅಂತ ಅಲ್ಲಿಯವರು ಖುಶ್ ಆಗಿ ಹೋಗತಿದ್ರು. ಏನ ಠುಮರಿ ಬಾರಸ್ತಾರ ಇವರು ಅಂತ ಹೇಳಿ ಆ ಲೈಟನ್ಯಾಗೂ ಅಷ್ಟ ಇಷ್ಟ ಅಲ್ಲಾ ಇದಕ್ಕಿಂತ ಲೈಟಿಗೆ ಏನೇನ ಬೇಕು ಅಂದ್ರ ಒಂದ ಸಂಧರ್ಭಾ ಹೀಂಗ ಬಂದಿತ್ತು ನಾವು ಉತ್ತರ ಪ್ರದೇಶ ಕಡೆ ರಾಮಪೂರಕ ಹೋಗಿದ್ವಿ ಅಲ್ಲಿ ಸ್ವಲ್ಪ ಮುಸ್ಲಿಮ್ಸ ಜಾಸ್ತಿ ಇದ್ರು. ಜನವಸತಿ

ಜಾಸ್ತಿ ಇತ್ತು. ಅವರಿಗೆ ಬೇಕಾಗಿದ್ದು ಈ ಕವಾಲಿ ಕಾರ್ಯಕ್ರಮಾ ಬೇಕಾಗಿತ್ತು. ಅಲ್ಯೊಂದು ಸ್ವಲ್ಪ ಕ್ಲಾಸಿಕಲ್ ಅಷ್ಟೊಂದು ಅವರಿಗೆ ತಿಳೀತಿದ್ದಿಲ್ಲ. ಆದರೂ ಇವರಿಗೆ ಗುರುತಿದ್ದಿಲ್ಲ ಕಾರ್ಯಕ್ರಮಕ್ಕೂ ಬಂದ ಬಿಟ್ರು ಕಾರ್ಯಕ್ರಮಕ್ಕೆ ಹೋದ ಕೂಡಲೆ ಇವರೇನೊ ಒಂದು ಖ್ಯಾಲ ಸುರು ಮಾಡಿದ್ರು. ಎಲ್ಲಾರು '' ಲಾಗಿಲೈಲ್‌ಲೈ ಲಾ'' ಎಂದು ಕವಾಲಿ ಸುರುಮಾಡ್ರಿ ಕವಾಲಿ ಬೇಕನಮಗ ಲೈಟ ಬೇಕು, ಗಜಲ್‌ಬೇಕು ಅಂತ ಅನಲಿಕಹತ್ತಿದ್ರು ಅಲ್ಲಿಯವರಲ್ಲಾ ಬೈ ಲಿಕ್ಕ ಹತ್ತಿದ್ರು ದೊಡ್ಡ ಕಲಾವಿದರ ಬಂದಾಗ ಅವರಿಗೆ ನೀವು ಅದೆಲ್ಲ ಬಿಟ್ಟ ನೀವು ಲೈಟ ಹಾಡ್ರಿ ಕವ್ವಾಲಿ ಹಾಡ್ರಿ ಅಂದ್ರೇನದರರ್ಥ ಬಯಲಿಕ್ಕ ಹತ್ತಿದರು. ಅಲ್ಲಿ ಮಂದಿ ಹಠಾನ ಹಿಡಿತಂತ. ಇದನ್ನ ಬೇಕ ನಮಗ ಕ್ಲಾಸಿಕಲ್ ಬ್ಯಾಡಾ ಅಂದಾಗ ರಾಜಗುರು ಅವರು ಆತಪ ನಿಮಗೇನ ಬೇಕ ಅದನ್ನ ಕೊಡತೇನಿ ಬರ್ರಿ ನಿಮಗ ಕವಾಲಿ ಬೇಕ ಎಷ್ಟು ತಾಸ ಬೇಕು. ಎರಡ ಮೂರು ತಾಸಬೇಕು ಒಳ್ಳೇದು ಹಂಗಾರ ಚಪ್ಪಾಳಿ ಹೊಡೆವರಗ ಕರೇರಿ. ಚಪ್ಪಾಳಿ ಹೊಡೆಯವರು ಕೂಡತಾರ ಅದಕ ಚಪ್ಪಾಳಿ ಹೊಡೆವರ ಕರೆದು ಆ ಮ್ಯಾಲೆ ಬೆಂಡಿಗೇರಿಯವರ ಏನ ನೋಡ್ರಿ '' ಕಾಳಜಿ ಬಿಡ ನೀನ ಹೆಂಗ ಬಾರಸತೇನಿ ನೋಡ ಅಂತ ಡೋಲಕಿ ಬಾಜ '' ಡೋಲಕೀ ಬಾರಸಿದರ ಹೆಂಗ ಬಾರಸತಾರ ಕವಾಲೀಗೆ ಹಂಗ ಇವರು ತಬಲಾದಾಗ ಬಾರಸಿದ್ರು ಆ ಡೊಲಕಿ ಲಗ್ಗಿ, ಲಡಿ ಇಷ್ಟ ಚಂದ ಹಿಡಿದರಲ್ಲಾ ಎಲ್ಲಾ ಮುಸ್ಲಿಮ್ರ ಒಂದು ಚಪ್ಪಾಳೆ ಹಾಕ್ಕೋಂತ ಕುಂತ್ರು. ಇವರೂ ಹಂಗ ಹಾಡಿದ್ರು ಅವರೂ ಹಂಗ ತಬಲಾ ಬಾರಸಿದ್ರು. ಅದು ಅಗದಿ ಒಂದು ಕವಾಲಿ ಪ್ರೊಗ್ರಾಮ ಕೇಳದಂಗ ಅನಸತಿತ್ತ ನಮಗ. ರಾಜಗುರು ಅವರ ಕವಾಲಿ ಮೂರು ತಾಸ ತನಕ ಕವಾಲಿ ಹಾಡಿದ್ರು. ಹಂಗ ವೆರಾಯಟಿ ಬಸವರಾಜ ಅವರ ಕಡೆ ಬಹುತೇಕ ಎಲ್ಲಾ ವೆರಾಯಟಿನೂ ಅವರ ಕಡೆ ಇದ್ವು. ಕವ್ವಾಲಿಯಿಂದ ಹಿಡಿದು ಕ್ಲಾಸಿಕಲ್‌ದಿಂದ ಹಿಡಿದು ಎಲ್ಲಾ ಎಲ್ಲಾದಕ್ಕೂ ಬಾರಸ್ತಿದ್ರು, ಭಜನೆಗೂ ಬಾರಸ್ತಿದ್ರು. ಅವರ ಹೇಳತಿದ್ರು ನಾ ಹಿಂದಕ ಕೀರ್ತನಕ್ಕೂ ಬಾರಸೇನಿ ನಾಟಕ ಕಂಪನಿಗೂ ಬಾರಸೇನಿ ಅವರು ಬೆಂಡಿಗೇರಿಯವರು ನಾಟಕ ಕಂಪನೀಗೂ ಬಾರಸ್ಯಾರು, ಹಂಗಾಗಿ ಸರ್ವಾಂಗೀಣ ಎಲ್ಲಾ ರೀತಿಯಿಂದ ವಿದ್ವತ್ಪೂರ್ಣ ವಾಗಿ ಬಾರಸೋರು ಅಂದರ ಬಸವರಾಜ ಬೆಂಡಿಗೇರಿಯವರು. ಒಂದು ದೊಡ್ಡ ಗ್ರೇಡನ್ಯಾಗ ಇದ್ದರವು '' ಟಾಪ '' ರ್‍ಯಾಕಿಂಗ ಅಂದರೂ ಅಡ್ಡಿ ಇಲ್ಲ ಅವರಿಗೆ ದುರ್ದೈವವಶಾತ್ ಅವರಿಗೆ '' ಟಾಪ '' ರ್‍ಯಾಂಕಿಂಗ್ ಕೊಡಲಿಲ್ಲ ಅಷ್ಟೆ ಅವರಿಗೆ ಆದ್ರ '' ಹಿ ವಾಜ ಮೋರ ದ್ಯಾನ '' ಎ '' ಟಾಪ ರ್‍ಯಾಂಕಿಂಗ ಆರ್ಟಿಸ್ಟ '' ಯಾಕಂದ್ರ ಅವರ ಶಿಷ್ಯಂದಿರು'' ಟಾಪ '' ರ್‍ಯಾಂಕಿಂಗ ಆಗ್ಯಾರ ಅವರ ಮಾರ್ಗದರ್ಶನ ಪಡೆದು '' ಟಾಪ '' ರ್‍ಯಾಂಕಿಂಗ ಆದಂಥಾ ಶಿಷ್ಯಂದಿರು ಇದ್ದಾರ ಎಲ್ಲಾ ಗ್ರೇಡ ಮೀರಿ ಇದಾರವು ಎಲ್ಲಾ ಗ್ರೇಡ ಮೀರಿದ್ದಂಥಾ ವಿದ್ವಾಂಸರಾದಂಥಾ ತಬಲಾವಾದಕರು ನಮ್ಮ ಬಸವರಾಜ

ಬೆಂಡಿಗೇರಿಯವರು. ಆ ಮ್ಯಾಲೆ ಅವರು ಹಿಂದಕ ಗುಲಾಮಲಿ ಸಂಗತೀನೂ ಬಾರಸಿದ್ರಂತ ನನಗದ ಗುರುತ್ತಿಲ್ಲ. ಅದು ನನಕಿಂತ ಹಳೇ ಕಾಲದ್ದು ನಾವು ಚಿಕ್ಕವರಿದ್ವಿ ಆವಾಗ ಗುಲಾಮಲಿ ಸಂಗತಿ ಬಾರಸ್ಯಾರಂತ ಅದ ನನ್ನ ಅನಭವಕ್ಕಿಲ್ಲ. ನಾ ಆಕಾಶವಾಣಿಗೆ ಬಂದ ಮ್ಯಾಲ ನನಗ ಅನುಭವ ಬಂದಿದ್ದಂದ್ರ ಶರಾಫತ ಹುಸೇನ, ಹಜಮತ ಹುಸೇನ, ನಿಸ್ಸಾರ ಹುಸೇನ ಇಂಥವರ ಸಂಗತಿ ಬಾರಸಿದ್ದ ನಾ ಕೇಳೇನಿ. ಯಾಕಂದ್ರ ಸ್ವಲ್ಪ ಜೊತೆಗೆ ಹಾರ್ಮೋನಿಯಮಕ್ಕ ನಾ ಇರತಿದ್ದೆ. ಅವರ ತಬಲಾಕ್ಕೆ ಬಸವರಾಜ ಬೆಂಡಿಗೇರಿಯವರ ಇರತಿದ್ರು.

ಸಂದರ್ಶಕ: - ಗಜಾನನ ಬುವಾ ಜೋಶಿಯವರ ಕಡೆ ಬಾಳ ಬಾರಸ್ಯಾರಂತಲ್ಲ?

ಕನಕಾಪೂರವರು: ಗಜಾನನ ಬುವಾ ಜೊತಿ ಸಾಕಷ್ಟು ಒಡನಾಟ. ಅವರ ಸಂಗತೀಲಿ ಸಾಕಷ್ಟು ಅವರು ಸಾಥ ಮಾಡತಿದ್ರು ವಾಯಲಿನ್‌ದ್ದು ಸಾಕಷ್ಟು ಸಲ ಸಾಥ-ಸಂಗತ ಮಾಡಿದ್ರಪಾ. ಅವರು ಯಾರದ ಕಾರ್ಯಕ್ರಮಕ್ಕಾದರೂ ಬಸವರಾಜ ಬೆಂಡಿಗೇರಿಯವರನ್ನು ಕೇಳತಿದ್ರು. ಈ ಕಡೆ ಬಂದ್ರ ಬಸವರಾಜ ಬೆಂಡಿಗೇರಿಯವರನ್ನು ಸ್ಪೆಶಲ್ ಹೇಳಿ ಬುಕ್ ಮಾಡಿಸಿಕೋತಿದ್ರು ಅಷ್ಟ ಪ್ರಸಿದ್ಧಿ ಇದ್ರು.

ಸಂದರ್ಶಕ:- ದೇವಧರ ಸ್ಕೂಲನ್ಯಾಗ ಇದ್ರಂತಲ್ರಿ ಬೆಂಡಿಗೇರಿಯವರು ಅದರ ಬಗ್ಗೆ ನಿಮಗೇನರ ಮಾಹಿತಿ?

ಕನಕಾಪೂರವರು:- ನಾ ಸಣ್ಣಾವ ಭಾಳ ಇದ್ದೆ. ದೇವಧರ ಸ್ಕೂಲನ್ಯಾಗ ಇದ್ದಾಗ ನಾನು ಈ ಲೈನಿಗೆ ಅಕಸ್ಮಾತ್ ಬಂದಿದ್ನಿ ಖರೆ ಆದರ ನಾ ಭಾಳ ಸಣ್ಣಾವ ಇದ್ದೆ. ಅದು ನನ್ನ ಹಿಂದಿನ ಕಾಲದ್ದು ಸರ್ವ ಸಾಧಾರಣ ಮೂರು ಡಿಕೇಡ ನನ್ನ ಸಂಗತೀಲೇನ ಬಾರಸ್ಯಾರವರು ದೊಡ್ಡ ಗುರುಗಳು ಅವರ ಶಿಷ್ಯಂದಿರ್ನು ಮತ್ತ ಅವರ ಶಿಷ್ಯಂದಿರ ಶಿಷ್ಯರು, ಮೂರು ಜನರೇಶನ್ ಬಾರಿಸಿದಂಥ ತಬಲಾ ವಾದಕರಲ್ಲಿ ಇವರೊಬ್ಬರು.

ಸಂದರ್ಶಕ:- ಕುಮಾರ ಗಂಧರ್ವ ಕಡೆ ಜಾಸ್ತಿ ಇವರು ಇದ ಬಾರಸಿದ್ರ ಕಾಣ್ತದ

ಕನಕಾಪೂರವರು:- ಕುಮಾರನ ಕೂಡ ನಾನು ಬಾರಸಿಲ್ಲ ಅವನ ಕೂಡ ನಾ ಯ್ಯಾರ ಜತಿ ಬಾರಸೇನಿ ಅವರ ಸಂಗತಿ ಎಲ್ಲಾನು ನನಗ ಇವತ್ತ ಅನುಭವ ಬಂದದ. ನನಗ ಅನಸಿದ ಮಟ್ಟಿಗೆ ಹಿಂದಕ ಇವರ ಸಂಗತೀಲೆ ಕಂಕಣಾ ಬ್ಯಾನ ರ್ಜಿ, ಅವರ ಯಾರS ಪಂ. ಪ್ರತಾಪ ನಾರಾಯಣ ಅವರ ಸಂಗತೀಲೆ ನಾನೂ ಬಾರಿಸಿದ್ದೆ ಇವರೂ ಬಾರಸಿದ್ರು.

ಸಂದರ್ಶಕ :- ಆ ಕಾರ್ಯಕ್ರಮದ ಸ್ವಲ್ಪ ಸಂದರ್ಭ ಹೇಳರೆಲ್ಲ?

ಕನಕಾಪೂರಅವರು:- ಅಂಥಾದೇನು ಸಂದರ್ಭದ್ದಂತಿಲ್ಲ. ಭಾಳ ಛಲೋ ಕಾರ್ಯಕ್ರಮಾ ಆಯ್ತು ಈ ಊರಾಗಲ್ಲದು ಪುಣೆದಾಗೆಲ್ಲೋ ಇಟ್ಟಿದ್ರವರು. ಅಲ್ಲಿ ಆವಾಗ ಇವರಿಗೆ ಕರದಿದ್ರು. ನಮ್ಮಿ

ಬ್ರ ನ್ನೂ ಬುಕ್ ಮಾಡಿದ್ರು. ನಾವಿಬ್ರೂ ಕೂಡೇ ಹೋಗಿದ್ವಿ. ಕಾರ್ಯಕ್ರಮ ಬಾಳ ಛಲೋ ಆಯ್ತು. ಪ್ರತಾಪ ನಾರಾಯಣವರು ಭಾಳ ಒಳ್ಳೆ ಖುಶ್ ಆದ್ರು. ಇವರ ಸಾಥೀ ಅಂದರ ಇಲ್ಲಿ ಧಾರವಾಡಕ ಇದ್ದರಂಕಾ ಇವರ ಸಾಥಿ ಭಯಂಕರ ಬಸವಣ್ಣೀ ಅಪ್ಪಾ ಬಸವಣ್ಣೀ ಅಪ್ಪಾ ಅಂತ ಹೇಳಿ ಪ್ರಿತಿ ಮಾಡ್ತಿದ್ರು ಅಲ್ಲಿಯವರು ಪ್ರಸಿದ್ಧ ಇದ್ರು. ಬಸವರಾಜ ಬೆಂಡಿಗೇರಿಯವರು ಅಂದರ ಮುಗದಹೋಯ್ತು ಎಲ್ಲಾರು ಅವರನ್ನs ತಗೋತಿದ್ರು ಭಾs ಳs ಚಂದ ಉತ್ತರ ಹಿಂದೂಸ್ತಾನದಾಗ ಅವರ ಜೊತೇಗೆ ಒಡನಾಟ ಆಗಬೇಕೆಂದರ ಈ ರಾಜಗುರು ಸಂಗತಿಯಲ್ಲೆ. ಎಲ್ಲೇ ಹೋಗಿದ್ದೆಲ್ಲಾ. ರಾಮಪೂರ ಮತ್ತು ಎಷ್ಟೋಸರತೆ ನಾ ಪಾಟನಾಕ್ಕೆ ಇವರ ಜೊತೇಗೆ ಹೋಗಿದ್ದೆ. ಕಲಕತ್ತಕ್ಕ ಎಲ್ಲೋ ಒಂದ ಸರೆ ಬಾರಸೀನ ನಾನು ಆದೂ ರಾಜಗುರು ಪ್ರೊಗ್ರಾಮ ಇದ್ದಾಗsನs. ಆವಾಗ್ಯೂ ಸಾಧಾರಣ ೨೫ ವರ್ಷ ತನಕ ಇವರ ಸಂಗತಿ ಒಡನಾಟ ಇದೆ. ೨೫ ವರ್ಷ ತನಕ ನಾನು ಬಸವರಾಜ ಬೆಂಡಿಗೇರಿ ರಾಜಗುರು ಸಂಗತೀಲೆ ಕಾರ್ಯಕ್ರಮಕ್ಕ ಕೂಡಿ ಹೋಗಿದ್ವಿ. ೨೫ ವರ್ಷ ಆದ ಮೇಲೆ ಅವರ ಸ್ವಲ್ಪ ಶಕ್ತಿ ಕುಂಠಿತ ಆಯ್ತು. ಅವರು ಕಲಸೋದು. ಅವರ ಕಾರ್ಯಕ್ರಮ ಬಿಟ್ಟು ಕಲಸೋದಕ್ಕ ಸುರು ಮಾಡಿದ್ರು. ಆ ಮ್ಯಾಲೆ ಗೆಸ್ಟ ಲೆಕ್ಚರರ ಅಂತ ಹೇಳಿ ಕರ್ನಾಟಕ ಯುನಿವರ್ಸಿಟಿಯೊಳಗ ತಗೊಂಡ್ರು.

ಸಂದರ್ಶಕ:- ಇವರಿಗೆ ಕರ್ನಾಟಕದ ತಿರಖ್ವಾ ಅಂತಿದ್ರಲ್ರಿs?

ಕನಕಾಪೂರಅವರು :- ಕರ್ನಾಟಕದ ತಿರಖ್ವಾ ಅಂತಿದ್ರುವರಿಗೆ. ತಿರಖ್ವಾನ ಜತಿ ಖಾಸs ದೊಸ್ತಿs ಇತ್ತು. ಇವರಿಬ್ರೂ ಅಗದಿ ಗೆಳೆಯರು. ಅವ್ರು ಹಿಂಗಾಗಿ ಅವರಿಗೆ ಹೇಳಾಕ ಅವರಕಿಂತ ಇವರು ಎಷ್ಟೋ ಚಿಕ್ಕವರು ಆದರೂ ಇವರ ಕಂಡರ ಬಹಾಳ ಪ್ರೀತಿ ಇತ್ತ ಅವರಿಗೆ. ತಿರಖ್ವಾರ ಸಂಗತಿ ಇವರ ಭಯಂಕರ ಪ್ರೀತಿ ಯಾಕಂದ್ರ ಮೆಹಬೂಬ ಖಾನ ಸಾಹೇಬರ್ದು ತಿರಖ್ವಾ ಅವರದು ದೋಸ್ತಿ ಇತ್ತಂತ. ಹಿಂಗಾಗಿ ಇವರದು ಇವರನ ಕಂಡರ ಬಹಾಳ ಪ್ರೀತಿ ತಿರಖ್ವಾ ಅವರು. ಇಲ್ಲಿ ಅವರಗ "ಕರ್ನಾಟಕದ ತಿರಖ್ವಾ" ಅಂತ ಇವರಿಗೆ ಅಂತಿದ್ರು ಮತ್ತು ಶಿಷ್ಯಂದಿರನ ತಯಾರ ಮಾಡ್ಯಾರ. ಇಡೀ ಹಿಂದೂಸ್ತಾನ ತುಂಬಾ ಶಿಷ್ಯಂದಿರ ಬಳಗ ಅದsನs ಅದ. ಅದರ ಬಗ್ಗೆ ಛಲೋ ನನಗ ಗೊತ್ತಿದ್ರ ಮಟ್ಟಿಗೆ ಒಳೇ ಇವರದ ಎಲ್ಲಾ ವಿದ್ಯಾ, ಬಿಟ್ಟೂ ಬಿಡದಂಗ ಇವರ್ಗಂಟ ಬಿದ್ದು ತಗೊಂಡವರಂದರ ಇಲ್ಲೊಬ್ಬರ ಇದ್ದಾರ ಕರ್ನಾಟಕದಾಗ ಅವರ ಪಂಡಿತ ರಘುನಾಥ ನಾಕೋಡ ಅಂತ ಹೇಳಿ. ಇವರದೆಲ್ಲಾ ಪಡಕೊಂಡು ಇವರದೆಲ್ಲಾ ವಿದ್ಯಾತಗೊಂಡು ಅವರು ''ಟಾಪ್ '' ರ್‍ಯಾಕಿಂಗ ಆಗ್ಯಾರ. ಬೆಂಡಿಗೇರಿಯವರ ಕಡೆ ಎಲ್ಲಾ ಮಾರ್ಗದರ್ಶನ ತೆಗೆದುಕೊಂಡು ಇವತ್ತಿಗೆ ಅವರು '' ಟಾಪ್ '' ರ್‍ಯಾಂಕಿಂಗ ಅಂತ ಹೇಳಿ ದೊಡ್ಡ ತಬಲಜಿ ಆಗ್ಯಾರ. ಅಂದ ಮ್ಯಾಲ ಇವರದು

ಪೋಸ್ಟ ಎಷ್ಟು ಇದ್ದಿರಬೇಕು ನೋಡರಿ, ಇವರ ಯೋಗ್ಯತಾ ಹಂಗ ಅಂಥಾ ಒಳ್ಳೆS '' ಟಾಪ್ '' ರ್‍ಯಾಂಕಿಂಗ ಕ್ವಾಲಿಟಿ ಇದ್ದಂತಾ ಕಲಾವಿದರನ್ನು ತಯಾರ ಮಾಡುವಂಥಾ ಕೆಪ್ಯಾಸಿಟಿ ಇವರಿಗಿತ್ತು. ಅಂದ ಮ್ಯಾಲೆ ಇವರು ದೊಡ್ಡ ಗುರುಗಳು. ಇಂಥಾ ಎಷ್ಟೋ ಮಂದಿ'' ಎ '' ಗ್ರೇಡ ಆರ್ಟಿಸ್ಟ ಇವತ ತಯಾರಾಗಿದ್ದಾರ '' ಎ '' ಗ್ರೇಡ ಆರ್ಟಿಸ್ಟ ರಗಡ ಮಂದಿ ಇದ್ದಾರ ಇವರ ಕೈಯಾಗ ತಯಾರಾದವರು. ಒಳ್ಳೇ ತಬಲಜಿ, ಒಳ್ಳೇ ಗುರು, ಒಳ್ಳೇ ಸಾಥೀದಾರರು, ಒಳ್ಳೇ ಸೋಲೋವಾದಕರು, ಸೋಲೊವಾದನ ಮಾಡಾಕ ಹತ್ಯಾರಂಕS ಅವರು '' ಎ '' ಗ್ರೇಡ ರಗಡ ಮಂದಿ ಕೂಡ್ತಿದ್ರು. ಸಾಕಷ್ಟ ಗವಾಯಿಗಳು ತಬಲಜಿ ಗಳು ತಾಳ ಹಾಕ್ಕೋಂತ ಕೂಡತಿದ್ರವರಗ ಹೆಂಗ ಚಕ್ರದಾರ ಪರನ್ನ ಬಾರಸ್ತಾರ ಸಮ್ಮಿಗೆ ಬರ್‍ತಾರ ಭಾಳ ಚಮಾತ್ಕಾರವಾಗಿ ಸಮ್ಮಿಗೆ ಬರತಿದ್ರವರು. ಹಿಂಗಾಗಿ ಸೋಲೋ ವಾದನನೂ ಅಷ್ಟೇ ನಿಷ್ಣಾತವಾಗಿ ದೀಡ ತಾಸ ಏನ ಬಾರಸಿದ್ರೂ ಒಟ್ಟ ದಣವನ್ನೂದS ಇರತಿದ್ದಿಲ್ಲ.

ಸಂದರ್ಶಕ:- ನೆನಪಿನ ಶಕ್ತಿ ಭಾಳ ಇತ್ತೇನ್ರಿ ಇವರಿಗೆ?

ಕನಕಾಪೂರ ಅವರು:- ಭಯಂಕರ ಇತ್ತ ನೆನಪಿನ ಶಕ್ತಿ. ಇಷ್ಟ ತನ್ನ ಅಷ್ಟS ಬೋಲ ಅಲ್ಲ, ಗಾಣೇದೆಲ್ಲಾ ಚೀಜಾ ನೆನಪಿತ್ತು ಇವರಿಗೆ ಮತ್ತ ರಾಗದ ಮಾಹಿತಿ ಇರತ್ತಿತ್ತು. ಇಂಥಾ ರಾಗ ಹೀಂಗS ಹೋಗತದS ಹಿಂಗ ಬರತದ. ಸಂಪೂರ್ಣ ಸ್ವರ ಜ್ಞಾನ ಅಗದಿ ಅತೀ ಸ್ವರಜ್ಞಾನ ಗಾಣೇ ಎಂಬೂದು ಗವಾಯಿಗಳಿಗೆ ಗೊತ್ತಿಲ್ಲದ ಕೆಲವೊಂದು ಮಾಹಿತಿ ರಾಗದ್ದು ಇವರಿಗಿತ್ತು. ಲಯದ್ದಂಕS ಇದ್ದೇ ಇತ್ತು. ಸಂಪೂರ್ಣ ಬರೇ ತಬಲಜೀ ಅಂತಲ್ಲಾ ಒಬ್ಬ ಪರಿಪೂರ್ಣ ಸಂಗೀತಗಾರ ಅನ್ನಲಿಕ್ಕೆ ಅಡ್ಡಿ ಇಲ್ಲಾ. ಅವರಿಗೆ ಹಾಡಲಿಕ್ಕೆ ಬರೂವಂಗಿಲ್ಲ ಇಷ್ಟೇ ಆದರ ಪರಿಪೂರ್ಣ ಸಂಗೀತಗಾರ ಸಂಗೀತಜ್ಞ ಅನಬೇಕು. ತಬಲಜೀ ಆದರ ಇವರು ಸಂಗೀತಜ್ಞ ಇದ್ರು.

## ೧೦. ಉಸ್ತಾದ ಬಾಲೇಖಾನ (ಸಿತಾರ ವಾದಕರು) :

ಸಂದರ್ಶಕರು :- ಬೆಂಡಿಗೇರಿಯವರ ಬಗ್ಗೆ ಹೇಳ್ರಿ.

ಬಾಲೇಖಾನ್ :- ಬಸವರಾಜ ಬೆಂಡಿಗೇರಿಯವರಿಗೆ ನನಗs ಪರಿಚಯ ಆಗಿದ್ದಂದ್ರ ನಾನು ಫಸ್ಟ ಬೆಳಗಾಂವ ಆರ್ಟಸರ್ಕಲ್ಲೊಳಗ ಆವಾಗ ಹಾಡತಿದ್ದೆ. ನಮ್ಮ ಹಾಡಿಗೆ ಅವರು ಜಜ್ ಅಂತ ಬಂದಿದ್ರು. ಫಸ್ಟ, ಬೆಳಗಾಂವ ಆರ್ಟಸರ್ಕಲ್ಲಿಂದ ಕಾಂಪಿಟೆಶನ ಬಹಳ ಜೋರಾಗತಿದ್ದವು ಆವಾಗ. ಆವಾಗ ಇವರು ಬಸವರಾಜ ಬೆಂಡಿಗೇರಿ ಅಂತ ನನಗ ಗುರುತಾತು. ಆ ಮೇಲೆ ಪುಣೆದಾಗೂ ಮೆಹಬೂಬ ಖಾನ ಸಾಹೇಬರ ಕಡೆ ಒಂದೆರಡ ಮೂರ ಸಲ ನೋಡಿದ್ದೆ ಆವಾಗ. ಅಷ್ಟ ಕ್ಲೊಸ ಪರಿಚಯ ಇರಲಿಲ್ಲ. ಆ ಮ್ಯಾಲೆ ಅವರು ಧಾರವಾಡಕ್ಕೇನ ಬಂದರು ಕರ್ನಾಟಕ ಕಾಲೇಜಿಗೆ ಆವಾಗ ಬಹಳ ಕ್ಲೊಸ. ನಮ್ಮ ತಂದಿಯವರೆಲ್ಲಾ ಕೂಡೇ ಕೆಲಸಾ ಮಾಡತಿದ್ದರವರು. ಅವರ ಬಗ್ಗೆ ವಿಶೇಷ ಹೇಳಬೇಕಂದ್ರ ಅತೀ ವಿಲಂಬಿತವಾಗಿ ಬಾರಸೊದ ಅಭ್ಯಾಸ ನನಗ ಅವರಿಂದನs ಯಾಕಂದರ ಅವರ ಕೈಯಾಗ ಲಯ ಹಿಂಗ ನಿಂದರತಿತ್ತು - ಒಂದ ಸಲ ಲಯ ಕೊಟ್ಟರ ಮುಗದ ಹೋತು. ಅವರು ಸರಿಯೊಂಗs ಇಲ್ಲವರು. ಆ ಮ್ಯಾಲೆ ಧಾರವಾಡಕ ಬಂದಾಗ ಭಾಳ ಸಂಪರ್ಕ ಬಂತು ಅವರಿಗೆ ನಮಗ ಬಹಳ ವರ್ಷದ ತನಕ ಕೂಡೇ ಅಲ್ಲಲ್ಲೇ ಪ್ರೊಗ್ರಾಮ ಮಾಡೇವೆ. ಪ್ರೊಗ್ರಾಮದಾಗ ಆವಾಗ ರಘು, ರವಿ ಎಲ್ಲಾರೂ ಇನ್ನೂ ಕಲೀತಿದ್ರಾವಾಗ, ಎಲ್ಲಾ ಪ್ರೊಗ್ರಾಮಗೂ ಬೆಂಡಿಗೇರಿನ ಬರತಿದ್ದರು ಆವಾಗ.

ಸಂದರ್ಶಕರು :- ಯಾವರs ಅಂಥಾ ಘಟನಾ ನಡದಾವೇನ್ರಿ ಸರ್ ಕಾರ್ಯಕ್ರಮದಲ್ಲಿ ಅವರು ಛಲೋ ಬಾರಸಿದ್ದು ಸಾಥಿನ್ಯಾಗ ಹಿಂದ ಯಾ ಇಸ್ವಿನ್ಯಾಗ ಹೆಂಗ?

ಬಾಲೇಖಾನ :- ಎಲ್ಲಾ ಪ್ರೋಗ್ರಾಮನೂ ಛಲೋನ ಆಗತಿತ್ತ ಆವಾಗ ಅವರ ಪ್ರೋಗಾಮ ಬಾರಿಸಿದ್ದು ಬಹಳ ಮತ್ತ ಅವರ ಸಾಥ - ಸಂಗತ ಮಾಡಿದರೂ ಸಹಿತ ಪದ್ಧತೀನ ಬ್ಯಾರೇ ಇತ್ತ ಅವರದು ಅಗದಿ ಒಂದ ಅಂದಾಜೀನ ಒಂದೇನೋ ಒಂದು ಲಯಕಾರಿ ಇದರಾಗ ಯದರಾಗ ಬಾರಸ್ತಾ ಇರ್ತೇವಲ್ಲ ಅದರ ಜೊತೆಗೆ ಜೊತೆಗೆ ಹೊಂಟ ಬಿಡೂ ಅಭ್ಯಾಸ ಅವರಿಗೆ. ಈ ಗೇನಾಗ್ಯಾವ ನಾವು ಒನ್ ಬಾಯ್ ಒನ್ ಬಾರಸೂದು ಅಭ್ಯಾಸಾಗ್ಯಾವ ಹೊಸಾ ಪದ್ದತಿ. ಅವರ ಹಂಗ ಬಾರಸತಿದ್ದಿಲ್ಲ. ಎನ ಒಂದ ಲಯಾದಲ್ಲಿ ಹೊಂಟರ ಅವರೂ ಅದs ಲಯದಾಗ ಹೊಂಡಬೇಕು ಲಯಕಾರಿ ಇವರ ಕಡೆ ಗಟ್ಟಿ ಇರಬೇಕು ಅಷ್ಟೆ ಆಮ್ಯಾಲೆ ಮುಂದಿನ ಸಮ್ ನಿಂದ ನಾ ಹಿಂಗ ಹೋಗತೇನನ್ನೂದು ಒಂದು ಅಂದಾಜ ಕಟ್ಟತಿದ್ರು. ಅದು ಬಹಳ ವಿಶೇಷ ಅವರದು. ಯಾರ ಜೋಡಿನ ಆತು. ಗಜಾನನ ಜೋಶಿನವರ ಜೋಡಿನನ ಕೇಳೇನಿ. ಲಯಕಾರಿಯೊಳಗಂತೂ ಬಹಳ

ಪ್ರಸಿದ್ಧರು. ಅವರ ಜೋಡಿ ಬಾರಸೂವಾಗ ಸಹಿತ ನಾ ಒಂದೆರಡ ಮೂರು ಪ್ರೊಗ್ರಾಮ ಕೇಳಿದೆ. ಅವರ ಕೂಡ. ಇಲ್ಲಿ ಧಾರವಾಡದಾಗೂ ಮಾಡಿದ್ವಿ ಅದನ್ನೂ ಕೇಳಿದಿವಿ

ಸಂದರ್ಶಕ:- ಮತ್ತ ಯಾರ್‍ಯಾರ ಕಡೆ ಅವರ ಬಾರಸಿದ್ದ ನೋಡಿದ್ರಿ.

ಬಾಲೇಖಾನ:- ನಾನೂ ಕೇಳಿದ್ದೂ ಅಂದರ ಹಲೀಮ ಜಾಫರ ಜೋಡಿಽ ಕೇಳೇನಿ ಪುಣಾದಲ್ಲಿ . ಪುಣಾದಲ್ಲಿಎಪ್ರಿಲ್, ಮೇ ಇವರು ಬೆಂಡಿಗೇರಿಯವರ ಸ್ವಭಾವ ಹೆಂಗಂದ್ರ ಸುಮ್ಮ ಕೂಡತಿದ್ದಿಲ್ಲವರು. ಯಾವತ್ತು ಏನೇನರ ಬಟ್ಟ ಖಟ ಪಟ ಮಾಡಕೊಂತ ಇರಾವರು. ಸ್ಟೇಜ ಮ್ಯಾಗೆ ಹಲೀಮ ಜಾಪರವರು ಅಲಾಪ ಮುಗೀತು. ಅರ್ಧ ತಾಸದತನಕ ಆಲಾಪ ಬಾರಸಿದರವರು. ಆ ಕೆಟ್ಟ ಶಕೀಗೆ ಶರಟೆಲ್ಲಾ ತಗದ ಕೂತಿದ್ದರಿವರು. ಆ ಮ್ಯಾಲೆ ಅವರು ಅವರ ಪ್ರೊಗ್ರಾಮ ಕೇಳಿ ಆಲಾಪಾದ ಮ್ಯಾಲೆ ಹೊಳ್ಳಿ ನೋಡಿದರ "ಆಪ ತಬಲಾ ಬಜಾತೆ" ಥೋಡಾ ಥೋಡಾ ಬಜಾತಾ ಹುಂ" ಅಂತ ಹೇಳಿ ಆ ಮ್ಯಾಲೆ ಸುರುವಾದ್ರ ಅವರ ಜೋಡಿ ಖರೇ ಹೇಳಬೇಕಂದ್ರ ಹಲೀಮ ಜಾಫರ ಇದ್ದ ಮಸ್ತ ಇದ್ದ ಯಾಕಂದರ ಅವರದು ಒನ್ ಬೈ ಒನ್ ಬಾರಸೊ ಪದ್ಧತಿ ಅಲ್ಲಾ. ಇವರು ಅವರ ಬೆನ್ನ ಹತ್ತೋದ ಅವರ ಏನು ಬಾರಸಿದ್ರ ಸಹಿತ ಖಾಲಿ ಸಂ ಕರೆಕ್ಟ ಅದರಾಗ ಽ ತೋರಸತಿದ್ರು. ಅವರ ಜೊತೆಗೆ ಬಾರಸಿದ್ರು ಸಹಿತ ಖಾಲಿ ಬಂದಾಗ ಖಾಲಿ ಕರೆಕ್ಟ ಗುರುತಾಗಲೇಬೇಕು ಅಷ್ಟು ಚಂದಾಗಿ ಸಿತಾರ ಕಡೆ ಬಾರಸಿದ್ರು .

ಸಂದರ್ಶಕರು :- ಎಲ್ಲಿ ಆಯಿತು ಸರ್ ಇವರ ಕಾರ್ಯಕ್ರಮ ಇದು.

ಬಾಲೇಖಾನ :- ಪೂನಾದಲ್ಲಿಡೆಕ್ಕನ್ ಜಮಖಾನದಲ್ಲಿ ಅಲ್ಲಿ ಒಂದು ಮಂಗಲ ಕಾರ್ಯಾಲಯ ಹಾಲನ್ಯಾಗ ಮಾಡಿದರಾವಾಗ. ಆವಾಗ ನಾವು ಪೂನಾದಲಿದ್ವಿ ಎಲ್ಲಾರು.

ಸಂದರ್ಶಕ :- ಎಷ್ಟನೇ ಇಸ್ವೀರಿ

ಬಾಲೇಖಾನ :- ಸಾಧಾರಣ ೫೬-೫೭ ಆ ಮ್ಯಾಲೆ ಅವರು ಬಾರಿಸಿದ ಮ್ಯಾಲೆ ಖರೆ ಭಯಂಕರ ಹುಶಾರ ಅವರು. ಹಲೀಮ ಜಾಫರ ಅನಕಾ ಅಪ್ಪಕೊಂಡ ಬಿಟ್ಟರವರಿಗೆ ಹಂಗ ಸಾಕಷ್ಟು ಪ್ರೊಗ್ರಾಮ್ಮೆಲ್ಲಾ ಇದೇ ತರಾ ಽ ಗಜಾನನ ಬುವಾ ಜೋಗೀನೂ ಹಂಗೇ ಆಮ್ಯಾಲೆ ಭಿಮಸೇನ ಜೋಶಿನೂ ಒಂದ ಸಲ ಪುಣೆದಾಗ ಽ ಕೇಳಿದ್ದೆ .

ಸಂದರ್ಶಕರು :- ಇಲ್ಲಿ ಧಾರವಾಡಕ್ಕೆ ಬಂದಾಗ ಅವರು ನುಡಸ್ಯಾರೇನ್ರಿ ಸರ್ ಭಿಮಸೇನ ಜೋಶಿಯವರ ಕಡೆ.

ಬಾಲೇಖಾನ :- ಇಲ್ಲಿ ಧಾರವಾಡದಾಗ ಬಂದಾಗ ಭಿಮಸೇನ ಜೋಶಿಯವರಿಗೆ ನಮ್ಮ ಪ್ರೊಗ್ರಾಮನ್ಯಾಗ ಬಾರಿಸಿರಬೇಕವರು ನನಗೆ ಅಷ್ಟು ನೆನಪಿಲ್ಲ.

ಸಂದರ್ಶಕರು :- ಪುಣಾದಾಗ ಯಾ ಇಸ್ವೀನ್ಯಾಗ ಬಾರಸಿದ್ರು ಸರ್

ಬಾಲೇಖಾನ :-ಅದೇ ೫೪- ೫೫ ಇರಬೇಕ

ಸಂದರ್ಶಕ :- ಬಾಂಬೇಕ ಇರತಿದ್ರ ಕಾಣತ್ತೈತರೀ ಅವರು.

ಬಾಲೇಖಾನ :- ಬಾಂಬೇ ರೇಡಿಯೋಕ ಬಾರಸಿದ್ರುಅವಾಗ

ಸಂದರ್ಶಕ :- ದೇವಧರ ಕ್ಲಾಸ್ ಅದS ಗಂಗೂಬಾಯಿ ಯವರು ಅಂದರು. ದೇವಧರ ಕ್ಲಾಸನ್ಯಾಗ ಎಲ್ಲಾ ಸಂಗೀತಕಾರರು ಬರತಿದ್ರು ಎಲ್ಲಾರ ಕಡೇನೂ ಬಾರಸ್ಯಾರ.

ಬಾಲೇಖಾನ :- ಕುಮಾರ ಗಂಧರ್ವನ ಜೋಡಿ ಎಲ್ಲಾರ ಜೋಡಿನೂ ಬಾರಸ್ಯಾರವರು ಇನ್ನೊಬ್ಬರ ಯಾರೋ ಅವರS ಬೆಂಡಿಗೇಯವರನS ಶಾಂತಾ ಆಪ್ಟೆ ಅಂತ ಯಾರೋ ಒಬ್ಬರು ಛಲೋ ಭಾಳ ಛಲೋ ಹಾಡತಿದ್ರಂತ.

ಸಂದರ್ಶಕರು :- ಅಮಜದ ಅಲಿಯವರ ಕಡೆ ಬಾರಸ್ಯಾರS?

ಬಾಲೇಖಾನ :- ಆಮಜದ ಅಲಿ ಜೋಡಿ ಇಲ್ಲಿ ಹುಬ್ಬಳ್ಳಿ ಕಾನಫರನ್ಸ ಆವಾಗ ಬಂದಾಗ ರೇಡಿಯೋದಲ್ಲಿ ಪ್ರೊಗ್ರಾಮ ಇಟಗೊಂಡಿದ್ವಿ. ಬೆಂಡಿಗೇರೀನ ಬುಕ್ ಮಾಡಿದ್ರವರು ಅ ಮ್ಯಾಲೆ ಹೆಲ್ಪಿಂಗ ನೇಚರ ಭಾಳ. ಈಗ ಪ್ರೊಗ್ರಾಮ ಇತ್ತಂದ್ರ ತಂಬೂರಿ ಗಿಂಬೂರಿ ಎಲ್ಲಾ ಕೂಡಸೂದು ಭಯಂಕರ ಇಂಟರೆಸ್ಟಿನಿಂದ ಮಾಡುವರುಅಗದಿ ಯಾರದS ಆಗಲಿ.

ಬುವಾ ಪ್ರೊಗ್ರಾಮ. ನಾ ತಬಲಾ ಬಾರಸತೇನಿ ಅಂದ್ರ ಬರೇ ತಬಲಾನS ಇಲ್ಲಾ. ತಂಬೂರಿ ಗಿಂಬೂರಿ ಕೂಡಿಸಿ ಮತ್ತ ಪ್ರೋತ್ಸಾಹ ಆರ್ಟಿಸ್ಟಿಗೆ ಕೊಡೂದು ಮಾಡತಿದ್ರು. ಭಾಳ ಚಂದ ಬಾರಸತಿದ್ರು. ಯಾವತ್ತೂ ಸೊಕ್ಕ ಮಾಡಿದ್ದು ನಾ ಏನ ಕೇಳಿಲ್ಲರಿ. ಆ ಮ್ಯಾಲೆ ಮೆಹಬೂಬ ಖಾನ ಸಾಹೇಬ್ರು ಒಬ್ಬೊಬ್ಬರಿಗೆ ಒಂದೊಂದು ತರಾಹ ಹೇಳಿ ಬಿಡತಿದ್ರು. ಬೆಂಡಿಗೇರಿಯವರ್ಗ ಕೊಟ್ಟಿದ್ದು ಮಮ್ಮುಲಾಲ ಕಡೆ ಇಲ್ಲಾ ಮಮ್ಮುಲಾಲ ಅವರ ಕಡೆ ಕೊಟ್ಟಿದ್ದುಗರಗ ಕಡೆ ಇಲ್ಲಾ. ಹಂಗ ಎಲ್ಲಾರನ್ನೂ ಬ್ಯಾರೆ ಬ್ಯಾರೆ ಕೇಳಾಕ ಬಂದಿದ್ರ ಹೇಳಿಬಿಡತಿದ್ರವರು. ಆ ಮ್ಯಾಲೆ ಮಮ್ಮುಲಾಲ ಬಂದಾಗ ಬೆಂಡಿಗೇರಿ ನಾವು ಎಲ್ಲಾ ಕೂತಾಗ ಆವಾಗ ವಿಷಯ ಬರತಿತ್ತ ಆವಾಗ. ಆವಾಗ ಅವರು ಹೇಳಿದ್ದು ಹಿಂಗ ಹೇಳಿದ್ರು ಇವರು ಹೇಳಿದ್ರು ಅಂತ ಡಿಸ್ಕಸ್ ಮಾಡಿ ಅವರ ಹೇಳಿದ್ದು ಇವರು ತಗೋಳೋದು ಹಿಂಗೆಲ್ಲಾ ಮಾಡತಿದ್ರವರು ಗರಗವರ ಕಡೇನೊ ಸಾಕಷ್ಟು ಮಾಹಿತಿ ಅದ ಅವರ ಬಗ್ಗೆ.

## ೯. ಪಂ. ರಘುನಾಥ ನಾಕೋಡ : ( ತಬಲಾ ವಾದಕರು)

ಸಂದರ್ಶಕ : ರವಿಕಿರಣ ನಾಕೋಡ (ರಾಜ್ಯೋತ್ಸವ ಪ್ರಶಸ್ತಿ ಪುರಸ್ಕೃತರು ಧಾರವಾಡ)

ಸಂದರ್ಶಕ : ಗುರುಗಳೆ, ಪಂಡಿತ ಬಸವರಾಜ ಬೆಂಡಿಗೇರಿಯವರು ತಮಗೆ ಪರಿಚಯ ಆಗಿದ್ದು ಯಾವಾಗ?

ರಘುನಾಥರವರು : ನಾನು ಮೊದಲಿಗೆ ನಮ್ಮ ತಂದೆಯವರ ಹತ್ತಿರ ತಬಲಾ ಅಭ್ಯಾಸ ಮಾಡಿದೆ ತಂದೆಯವರೆ ನನ್ನ ಮೊದಲ ಗುರುಗಳು. ಅರ್ಜುನಸಾ ನಾಕೋಡ ಅಂತ. ಅವರೆಲ್ಲ ಕೆಲವು ತಾಲಗಳನ್ನ ಠೇಕಾಗಳನ್ನ ಇವನ್ನೆಲ್ಲಾ ನನಗೆ ನುಡಿಸಿ ಅವರ ಸ್ವತಃ ತಬಲಾ ಬರಸ್ತಿದ್ರು, ಹಾಡ್ತಿದ್ರು, ತಬಲಾ ಬಾರಸ್ತಿದ್ರು ಹೀಗಾಗಿ ಅವರಿಂದ ನನಗೆ ಪಾಠ ಪ್ರರಂಭಾವಾಯ್ತು. ಅವರ ಜೊತೆಗೆ ನಾನು ಸಾಥ-ಸಂಗತಗ ಹೊರಗನೂ ಹೋಗತಿದ್ದೆ. ಅವರ ಪರಿಚಯ ನನಗ ಹೆಂಗಾಯ್ತಂದ್ರ ವೀರಣ್ಣಾ ಕಾಮಕರ ಅಂತ ಹೇಳಿ ಬೆಂಡಿಗೇರಿಯವರ ಶಿಷ್ಯರೊಬ್ಬರಿದ್ದರು ಹುಬ್ಬಳ್ಳಿಯಲ್ಲಿ ಅವರು "ಗಾಯತ್ರಿ ಗಾಯನ ಶಾಲಾ" ಅಂತ ಹೇಳಿ ನಿವ್ ಕಾಟನ ಮಾರ್ಕೆಟ ಹುಬ್ಬಳ್ಳಿಯಲ್ಲಿ ಒಂದ ಸಂಗೀತ ಶಾಲೆ ಮಾಡಿಕೊಂಡಿದ್ರು. ಅವರು ಸಿತಾರ ಬಾರಸ್ತಿದ್ರು, ಹಾಡತಿದ್ರು, ತಬಲಾನೂ ಬಾರಸ್ತಿದ್ರು, ಕಲಿಸ್ತಿದ್ರು, ಮೂರುನು ತಬಲಾ ಕಲಿಸ್ತಿದ್ರಂದ್ರ ಅವರ ಬೆಂಡಿಗೇರಿಯವರ ಕಡೆಯಿಂದ ಸಂಗ್ರಹ ತೊಗಂಡಿದ್ರು ೧೯೬೬ ರಿಂದ ಅವರು ಸಂಗೀತ ಕಲಿಯುವ ಸಲುವಾಗಿ ನಮ್ಮ ತಂದೆಯವರ ಹತ್ತಿರ ಬಂದರು. ಅವಾಗ ನಾನು ನುಡಿಸುವಂತಹ ತಬಲಾ ಕೇಳಿ ಗುರುಗಳ ಇವನ ತಬಲಾ ಕಲಿಸಿ ಬಿಡ್ತಿನ್ನಾನು ಕಳಿಸಿ ಕೊಟ್ಟಬಿಡ್ರಿ ಅಂತ ಹೇಳಿ ನಮ್ಮ ತಂದೆಯವರಿಗೆ ವೀರಣ್ಣ ಕಾಮಕರವರು ಹೇಳಿದ್ರು. ನಮ್ಮ ತಂದೆಯವರು ಹಂಗಾರ ಕರಕೊಂಡ ಹೋಗರಿ ಅಂದರು. ಅಲ್ಲಿ ಹುಬ್ಬಳ್ಳಿಯಲ್ಲಿ ಬೆಳಿಗ್ಗೆ ನನ್ನ ಕರಕೊಂಡ ಹೋದರಂದರ ರಾತ್ರಿ ಹನ್ನೊಂದಕ್ಕ ಮನಿಗೆ ಬರ್ತಿದ್ದೆ. ನಾನು ಅಂದರ ಆ ನಮೂನೆ ಅಭ್ಯಾಸ ಮಾಡಸ್ತಿದ್ರು ಅವಾಗ ಬೆಂಡಿಗೇರಿಯವರು ಹೇಳಿದಂತಹಾ ಬೋಲುಗಳನ್ನು ವೀರಣ್ಣಾ ಕಾಮಕರವರು ನನಗ ಕಲಸ್ತಾ ಇದ್ದರು ಬೆಂಡಿಗೇರಿಯವರು ಏನ ಮಾಡ್ತಿದ್ರು ಧಾರವಾಡದಿಂದ ವೀರಣ್ಣಾ ಕಾಮಕರವರ ಮನೆಗೆ ವಾರಕೊಂದೆರಡ ಸಲ ಇದನ್ನಿಟಕೊಂಡಿದ್ರು ವೀರಣ್ಣಾ ಕಾಮಕರವರಿಗೆ ಬೆಂಡಿಗೇರಿಯವರಿಗೆ ಬ್ಹಾಳ ಒಂದ ಸುಬಂಧ ಇತ್ತು. ಹೀಗಾಗಿ ಅವರು ಅವರ ಮನೆಗೆ ಬರ್ತಾಯಿದ್ದರು ಹೀಗಾಗಿ ನನಗೆ ಅಲ್ಲಿ ಬೆಂಡಿಗೇರಿಯವರ ಪರಿಚಯ ಶುರು ಆಯಿತು ಪರಿಚಯನು ಆಯ್ತು ಮತ್ತೆ ಅವರ ಕಡೆಯಿಂದ ಅಭ್ಯಾಸನು ಆಯ್ತು ಹಿಂಗ ಶುರು ಆಯ್ತು. ಏನರ ತಪ್ಪಬಾರಿಸಿದ ಕೂಡ್ಲೆ ಹಂಗಲ್ಲಪ್ಪ ಹಿಂಗಬಾರಿಸು ಅಂತ ಹೇಳ್ತಿದ್ರು ಯಾಕಂದ್ರ ಬೆಂಡಿಗೇರಿಯವರ ಬೊಲುಗಳನ್ನೆ ಇವರ ತೊಗಂಡಿದ್ರ ಇವರೂ ಹೇಳವರು, ಇವರ ಅಭ್ಯಾಸ ಮಾಡಸವಾಗು ವೀರಣ್ಣಾ ಕಾಮಕರವರ ಆಮೇಲೆ ಏನರ ತಪ್ಪಿದ್ದರ ಇವರ ಹೇಳವರ ಬೆಂಡಿಗೇರಿಯವರು ಹಿಂಗಾಗಿ ಪರಿಚಯ ಶುರು ಆಯ್ತು.

ಸಂದರ್ಶಕ:- ಪಂಡಿತ ಬಸವರಾಜ ಬೆಂಡಿಗೇರಿಯವರ ಕಡೆ ತಾವು ಯಾವಾಗ ಧಾರವಾಡಕ್ಕ ಬಂದ್ರಿ ಯಾ ಇಸ್ವಿಯಲ್ಲಿ ಶುರು ಮಾಡಿದ್ರಿ?

ರಘುನಾಥರವರು:- ಸದ್ಯ ಮೂರು ನಾಲ್ಕು ವರ್ಷ ನಾನು ಇವರ ಹತ್ತಿರ ವೀರಣ್ಣಾ ಕಾಮಕರ ಹತ್ತಿರ ಕಲತೆ ಯಾವಾಗರೊಮ್ಮೆ ಧಾರವಾಡಕ್ಕ ಬಂದೆ ಅಂದ್ರ ಬೆಂಡಿಗೇರಿಯವರ ಕಡೆ ಹೋಗೆ ಬರ್ತಾಯಿದ್ದೆ ಅಲ್ಲಿ ಹೋಗಿ ನನಗೆನ ಬೇಕು "ಏ ಬಾರೊ ರಘುನಾಥಾ ಬಾ ತಗೂ ಈ ಬೋಲ ಹಿಂಗದ ಈ ಬೋಲ ಹಿಂಗದ" ಅಂತ ಎಲ್ಲಾನೂ ಪ್ರಿತಿಲೆ ಕೊಡ್ತಾ ಇದ್ದರವರು ಹಿಂಗಾಗಿ ಎರಡೂ ಕಡೆಯಿಂದ ಲಾಭಾಯ್ತು

ಸಂದರ್ಶಕ:- ಇವರು ದಿಲ್ಲಿ, ಪೂರಬ ಹಾಗೂ ಅಜರಡಾ ಘರಾಣೆಗಳನ್ನೂ ಹೆಚ್ಚಾಗಿ ನುಡಿಸ್ತಿದ್ರಂತ ಕೇಳಿನ್ನಾನ

ರಘುನಾಥರವರು:- ಹೌದ, ಅವರ ಘರಾಣೆನೆ ಪೂರಬ, ದಿಲ್ಲಿ, ಅಜರಡಾ ಮೂರುನು ನುಡಿಸ್ತಾ ಇದ್ರವರು ಮತ್ತ ಬೇರೆ ಘರಾಣೆದ ಅಭ್ಯಾಸನು ಅವರಗಾಗಿತ್ತು ಅವರ ಗುರುಗಳು ಮೆಹಬೂಬ ಖಾನ ಸಾಹೇಬರಂತ ಏನಿದ್ರು ಅವರು ಬ್ಹಾಳ ಜನ ಹತ್ತರ ಅಭ್ಯಾಸ ಮಾಡಿದ್ರು ಜುಗನಾ ಖಾನಂತ್ಹೇಳಿ ಪೂರಬ ಘರಾಣೆಯ ಗುರುಗಳ ಕಡೆ ಅವರ ಅಭ್ಯಾಸ ಮಾಡಿದ್ರು ಮೆಹಬೂಬ ಖಾನ ಸಾಹೇಬರು ನಂತರ ಜಹಾಂಗೀರ-ಖಾನ ಸಾಹೇಬ, ಮತ್ತೆ ನಮ್ಮ ಅಹಮದ ಜಾನ ತಿರಖ್ವಾ , ಇವರೆಲ್ಲರ ಕಡೆನೂ ಕೆಲವು ಸಂಗ್ರಹಗಳನ್ನು ತೊಂಗಡಿದ್ರು . ಬಲವಂತರಾವ ವಾಟ್ವೆ ಅಂತ ಹೇಳಿ ಪಖವಾಜ ಬಾರಿಸ್ತಿದ್ರು. ಪಖವಾಜದ ಬೋಲುಗಳು ಕೆಲವು ನಮ್ಮ ತಬ್ಲಾದಲ್ಲಿ ಕಂಡು ಬರತಾವ ಹೀಗಾಗಿ (ಫರೂಖಾಬಾದ, ದಿಲ್ಲಿ, ಆಜರಡಾ) ಪಂಜಾಬ ಘರಾಣೆಯವರ ಸಾಕಷ್ಟು ಬೋಲು ಅವರ ಕಡೆ ಸಂಗ್ರಹ ಇದ್ವು. ಹೀಗಾಗಿ ಅವರಿಗೆ ಏನಾಯ್ತು ಎಲ್ಲಾ ಘರಾಣೆದ್ದ ಒಂದ ವೈಶಿಷ್ಟ್ಯ ನಮ್ಮ ತಬಲಾದಲ್ಲಿ ನೋಡಲಿಕ್ಕೆ ಕಾಣ್ತದ.

ಸಂದರ್ಶಕ:- ಇವರ ಸಾಥ-ಸಂಗತ ಯಾವ ರೀತಿ ಇತ್ತು ತಾವು ಸ್ವಲ್ಪ ಹೇಳ್ತಿರಿ?

ರಘುನಾಥರವರು:- ಅಧ್ಬುತ, ಸಾಥ-ಸಂಗತದ ಬಗ್ಗೆ ಬೆಂಡಿಗೇರಿಯವರ ಬಗ್ಗೆ ಏನೂ ಮಾತಾಡೊಂಗಿಲ್ಲಾ, ಅವರಿಗೆ ಸಾಥ-ಸಂಗತಕಿಂತ ಮೊದಲ ಏನಾಗ್ತಿತ್ತು ಸಾಥ-ಸಂಗತ ಮಾಡಬೇಕಾರ ಅವರ ಏನ ಮಾಡ್ತಿದ್ರು ಕೂತ ಮ್ಯಾಲ ಮೊದಲು ತಂಬೂರಿ ಕೂಡಸುದು ತಂಬೂರಿ ಕೂಡ್ಸುವಂತಾ ಶೃತಿ ಜ್ಞಾನ ಇಂಥಾದಿತ್ತವರಿಗೆ ಸ್ವತಾ ತಂಬೂರಿ ಕೂಡಸ್ತಿದ್ರು ಸ್ವತಾ ಚೀಜುಗಳನ್ನು ಹಾಡಿ ತೊರಸ್ತಿದ್ರು ಚೀಜಗಳ ಸಂಗ್ರಹನು ಸಾಕಷ್ಟ ಇತ್ತವರಗ ಕೇಳಿ ಕೇಳಿ ದೇವಧರ ಕ್ಲಾಸನಲ್ಲಿದ್ದಾಗ ಬೆಂಡಿಗೇರಿಯವರು ಮುಂಬೈ ದೇವಧರ ಕ್ಲಾಸನಲ್ಲಿ ಕುಮಾರ ಗಂಧರ್ವ ಅವರ ಕಡೆ ಇದ್ದಾಗ ಅವರು ಸಂಗತ ಮಾಡಬೇಕಾರ ಅಲ್ಲಿ ಎಲ್ಲಾ ರೀತಿಯ ಸಂಗೀತಗಾರರು ಬಂದಹೊಗ್ತಿದ್ರಲ್ಲೆ. ಎಲ್ಲಾರು ಹಾಡಬೇಕಲ್ಲೆ. ಎಂಥಾ ದೊಡ್ಡದೊಡ್ಡ ಬಡೆ ಗುಲಾಮಲಿ ಖಾನ

ಇವರೆಲ್ಲಾ ನಮ್ಮ ಕಾಗಲಕರ ಬುವಾ, ವಝೇ ಬುವಾ ದೊಡ್ಡದೊಡ್ಡ ಸಂಗೀತಗಾರರು ಅವಾಗೆಲ್ಲಾ ಅಲ್ಲೆಲ್ಲಾ ಬಂದೇ ಹೊಗ್ತಿದ್ರು. ಹೀಗಾಗಿ ದೊಡದೊಡ ಸಂಪರ್ಕದಲ್ಲಿ ಅವರಿದ್ರು ರವಿಶಂಕರ ಕಡೆ ನುಡಿಸಿದಾರ, ಗಜಾನನರಾವ ಜೋಶಿಯವರ ಕಡೆ ನುಡಿಸಿದಾರ, ಹಿರಾಬಾಯಿ ಬಡೋದೆಕರ ಆ ಮೇಲೆ ಸಾಕಷ್ಟ ಜನರ ಕಡೆ ಮನ್ಸೂರವರ ಕಡೆಯಂತು ಸಾಕಷ್ಟ ನುಡಿಸಿದಾರವರು ಇತ್ತಿತ್ಲಾಗ ಇಲ್ಲಿ ಬಂದ ಮೇಲೆ ಹೀಗಾಗಿ ಅವರು ಅಲ್ಲಿದ್ದಾಗ ಸಾಕಷ್ಟ ಅವರಿಗೆ ಹಾಡವರು ಮತ್ತ ತಬಲಾದವರು ಇಬ್ಬರೂ ಬರ್ತಾ ಇದ್ರಲ್ಲೆ ದೇವಧರ ಕ್ಲಾಸಿನಲ್ಲಿ ಅವಾಗ ಏನಾಯ್ತು ಅವರು ತಬಲಾ ನುಡಿಸುವ್ದ ನೋಡಿ ಅಚ್ಛಾ ಬಜಾತಾ ಹೈ ಬೇಟಾ ಹಾ ಲೊ ಹಮಾರಾ ಎಕಗತ ಲಿಕಲೊ, ಹಮರಾ ಎಕ ಚಕ್ರದಾರ ಲಿಕಲೊ ಹಿಂಗ ಪ್ರೇಮದಿಂದ ಅವರಿಗೆ ವಿದ್ಯಾದಾನ ಮಾಡ್ತಿದ್ರು. ಅದು ಎಲ್ಲಾ ಬೆಂಡಿಗೇರಿಯವರು ನೆನಪಿನಲ್ಲಿಟ್ಕೊಂಡಿದ್ರದನ್ನ. ಅವರ ಬರಕೊಂಡ ಇಟ್ಕೊಲಿಲ್ಲ ನೆನಪಿನಲ್ಲಿ ಅಂಥಾ ನೆನಪಿನ ಶಕ್ತಿ ಬೆಂಡಿಗೇರಿಯವರ್ಹತ್ತರ. ಹಿಂಗಾಗಿ ಅಲ್ಲಿಂದ ಅವರು ಬಾಂಬೆದಲ್ಲಿ ದೇವಧರ ಕ್ಲಾಸ ಬಿಟ್ಟಮ್ಯಾಲೆ ಇಲ್ಲೆ ಧಾರವಾಡಕ್ಕೆ ಬಂದ ನೆಲೆಸಿದ್ರು. ಧಾರವಾಡ ಮನ್ಸೂರವರ ಪರಿಚಯಯಾಯ್ತು. ಡಾ.ಮಲ್ಲಿಕಾರ್ಜುನ ಮನ್ಸೂರವರ ಪರಿಚಯಾಯ್ತು ಆಮ್ಯಾಲೆ ಕರ್ನಾಟಕ ಕಾಲೇಜಿನಲ್ಲಿ ಲೆಕ್ಚರರ ಅಂತವರು ಸಾಕಷ್ಟ ದಿವಸ ಇಲ್ಲೆ ಸೇವಾ ಮಾಡಿದಾರೆ ಕರ್ನಾಟಕ ಕಾಲೇಜಿನಲ್ಲಿ ಸಾಕಷ್ಟು ಶಿಷ್ಯರನ್ನು ತಯಾರು ಮಾಡಿದರು.

ಸಂದರ್ಶಕ : ಅವರು ಎಲ್ಲಾ ಶಿಷ್ಯರ ಕಡೆ ಯಾವ ರೀತಿ ಇದ್ರು ಅವರ ಸ್ವಭಾವ ಯಾವ ರೀತಿ ಇತ್ತು.

ರಘುನಾಥರವರು : ಸ್ವಭಾವ ಮಗುವಿನ ಸ್ವಭಾವ ಅವರದು ಯಾರೆ ಹೋಗಲಿ ಅವರ ಕೇಳ್ಲಿ ಬಿಡ್ಲಿ ಏ ಇದ ಒಂದ ಬೋಲ ಅದ ನೋಡ, ಇದ ಒಂದು ಚಕ್ರದಾರ ಅದ ನೋಡ ಬರಕೊ. ಎಲ್ಲಾ ಪ್ರೀತಿಯಿಂದ ಕೊಡ್ತಿದ್ರವರ. ಅವರಲ್ಲಿ ಆ ಬೇಧಭಾವನ ಇದ್ದಿದ್ದಿಲ್ಲಾ. ಅದೊಂದು ಒಳ್ಳೆ ಗುಣಾ ಅವರಲ್ಲಿ ನಾವ ನೋಡಿದ್ವಿ.

ಸಂದರ್ಶಕ: ಈಗ ನನ್ನ ಪ್ರಬಂಧದಲ್ಲಿ ನಾನು ಕೆಲವೊಂದು ಬೆಂಡಿಗೇರಿಯವರ ಬೋಲುಗಳನ್ನು ತಮಕಡೆಯಿಂದ ತಗೊಂಡಿದಿನಿ ಎಲ್ಲಾ ತಮಗ ಅವು ಗುರುಗಳ ಮುಖಾಂತರ ಸಿಕಿದ್ದವಲ್ರಿವು?

ರಘುನಾಥರವರು: ಹೌದು ಹೌದು ಹೌದು ಬೆಂಡಿಗೇರಿಯವರ ಕಡೆಯಿಂದ ಕೆಲವು ನನಗ ಹೇಳಿದ ಪ್ರಕಾರವರು ಈಗ ತೀನತಾಲದಲ್ಲಿರುವಂತಹಾ ಒಂದು ಗತ್ತ ಅಥವಾ ಒಂದ ಗತ್ತನ್ನ ಯಾವದರ ಬೇರೆ ತಾಲದಲ್ಲಿ ಹ್ಯಾಗೆ ನುಡಿಸ್ಬೇಕಪ್ಪಾಗತ್ತಾಗಿ ಹ್ಯಾಂಗನುಡಿಸ್ಬೇಕು, ಚಕ್ರದಾರಾಗಿ ಹ್ಯಾಂಗ ನುಡಿಸ್ಬೇಕು ಅದೇ ಬೋಲುಗಳನ್ನು ಆ ಬೇರೆ ಬೇರೆ ತಾಳಗಳಲ್ಲಿ ಹೆಂಗ ಬರತಾವ ಅನ್ನುವದನ್ನ ಕಲಿಸಿಕಟ್ರು ಬೆಂಡಿಗೇರಿಯವರು. ಇತ್ತಿತ್ಲಾಗ ಅವರ ಬಂದ ನಮ್ಮ ಮನೆಯಲ್ಲಿಯೇ ಹುಬ್ಬಳ್ಳಿಯಲ್ಲಿ ನಾವು ಮನೆ ಮಾಡಿದಾಗ ಎಂಟೆಂಟ ದಿವಸ ನಮ್ಮ ಮನಿಗೆ ಬರ್ತಾ ಇದ್ರವರು. ನಾವ ಸಣ್ಣವರಿದ್ದಾಗ ಅಲ್ಲಿ ಕಲಿಬೇಕಾರ ನಮ್ಮ ಮನೆಯಲ್ಲಿ ಬಂದವರು ವಾಸ ಮಾಡ್ತಿದ್ರು ಅಲ್ಲಿಂದ ಪರಿಚಯ ಆದ

ವೀರಣ್ಣಾ ಕಾಮಕರವರ ಮನಿಗ ಹೋದಾಗ ಅಲ್ಲಿಂದ ಮತ್ತ ನಮ್ಮ ಮನಿಗೂ ಬರ್ತ್ತಿದ್ರು ಎಂಟೆಂಟ ದಿವಸ ಅಲ್ಲಿ ಹೇಳವರವರು ನಮಗ ಹಿಂಗಿಂಗ ಮಾಡಬೇಕು ಹಿಂಗಿಂಗ ಇದ ಮಾಡಬೇಕು ಎಲ್ಲಾ ರೀತಿಯ ಒಂದ ಇದನ್ನ ಅವರು ಕಲಿಸಿ ಕೊಟ್ಟರು.

ಸಂದರ್ಶಕ : ಇವರಗ ಕರ್ನಾಟಕದ ತಿರಖ್ವಾ ಅಂತ ಅವರನ್ನ ಕರಿತಿದ್ರಂತಲ್ರಿ?

ರಘುನಾಥರವರು : ಹೌದು ಒಮ್ಮೆ ಏನಾಯ್ತು ಗಜಾನನರಾವ ಜೋಶಿ, ಗಜಾನನರಾವ ಜೋಶಿ ತಿರಖ್ವಾರ ಹತ್ತಿರಷ್ಟ ತೊಗೊಂಡವರು ಸಾಥ-ಸಂಗತಗೆ ಕರಕೊಂಡ ಹೋಈಗ್ತಿದ್ರು. ತಿರಖ್ವಾಗ ಬ್ಹಾಳ ಅವರದು. ಅಹಮದ ಜಾನ ತಿರಖ್ವಾ ಮತ್ತು ಗಜಾನನ ರಾವ ಜೋಶಿ ಅಂದರ ಮುಗದ ಹೋತ. ಲಯಕಾರಿಯೊಳಗ ಇಬ್ಬರು ಕೂಡಿ ಲಯಕಾರಿ ಮಾಡ್ಲಿಕತ್ತರ ಮುಗದಹೊಯ್ತ ಜನ ಎಲ್ಲಾ ಮುಗ್ಧ ಆಗಿ ಬಿಡವರ ಆ ಪ್ರೊಗ್ರಾಮ ಕೇಳಿ ಅವರು ಲಯಕಾರಿ ಚೆನ್ನಾಗಿ ಮಾಡ್ತಿದ್ರು. ಒಮ್ಮೆ ಪ್ರಸಂಗ ಹಿಂಗ ಬಂತಲ್ಲಾ ತಿರಖ್ವಾ ಒಮ್ಮೆ ಸಿಗಲಿಲ್ಲ ಅವರಿಗೆ. ಅವಾಗ ಏನ ಮಾಡಿದ್ರು ಅಹಮದ ಜಾನ ತಿರಖ್ವಾ ಇಲ್ಲ ಅಂದ ಕೂಡ್ಲೆ ಬೆಂಡಿಗೇರಿಯವರನ್ನ ಒಮ್ಮೆ ಅವರ ಜೊತೆ ನುಡುಸ್ಬೇಕಂತ್ಹೇಳಿ ಫಿಕ್ಸ ಮಾಡಿದ್ರು. ಆತು ಬೆಂಡಿಗೇರಿಯವರು ನುಡಿಸ್ಲಿಕ್ಕ ಶುರು ಮಾಡಿದ್ರು. ಇಷ್ಟ ಖುಷಿ ಆಗ ಬಿಡ್ತವರಿಗೆ ಗಜಾನನ ರಾವ ಜೋಶಿ ಅವರಿಗೆ "ಹಾ! ಕ್ಯಾ ಬಜಾತೆ ಹೊ! ಎ ಹಮಾರೆ ಕರ್ನಾಟಕ್ಕೆ ತಿರಖ್ವಾ ಹೈ" ಅಂತ್ಹೇಳಿ ಮಾತಾಡಿದರು. ಅಂಥಾ ಒಂದ ಲಯಕಾರಿ ಅಂಥಾ ಒಂದ ಲಯ ಬ್ರಹ್ಮ ಅಂತಿದ್ರವರಿಗೆ. ಗಜಾನನ ಬುವಾ ಜೋಶಿ ಅವರ ಜೊತೆಗಿವ್ರು ಸಾಕಷ್ಟ ಆ ಮೇಲೆ ಆ ಕಾರ್ಯಕ್ರಮಾ ಆದ ಮೇಲೆ ಸಾಕಷ್ಟ ಕಾರ್ಯಕ್ರಮ ನುಡಿಸ್ಬಿಟ್ರು. ಅದ್ಭುತವಾದ ಸಾಧನೆ ಅವರದು! ಎಲ್ಲಾ ಕಡೆ ಬ್ಹಾಳ ಜನಕಡೆ ನುಡಿಸಿದ್ರು. ಇತ್ತಿತ್ಲಾಗ ಮನಸೂರವರ ಕಡೆ ಸಾಕಷ್ಟು ನುಡಿಸಿದ್ರು. ರಾಜಗುರವರ ಜತೆ ನುಡಿಸಿದ್ರು. ಭಿಮಸೇನ ಜೋಶಿಯವರ ಜೊತೆಗೆ ನುಡಿಸಿದ್ದಾರೆ. ಅಲ್ಲಿದ್ದಾಗ ಹೀರಾಬಾಯಿ ಬಡೋದೆಕರ, ಭಿಮಸೇನ ಜೋಶಿ ಆಮೇಲೆ ಕಿಶೋರಿ ಅಮೋನಕರ ಅಲ್ಲಿ ಸಾಕಷ್ಟ ಜನ. ಮೊಗುಬಾಯಿ ಕುರಡಿಕರವರ ಕಡೆ ನುಡಿಸಿದಾರಂತ ಕೇಳಿದಿನಿ. ಸಾಕಷ್ಟ ಅವರು ಎಲ್ಲಾ ಕಲಾಕಾರರಿಗೂ ಅವರ ಸಾಥ-ಸಂಗತ ಬ್ಹಾಳ ಪ್ರೀತಿಯಿಂದ ನುಡಿಸ್ತಿದ್ರು.

## ೧೨. ಡಾ. ರಾಚಯ್ಯ ಹಿರೇಮಠ (ತಬಲಾ ವಾದಕರು) :

**ಸಂದರ್ಶಕ - ರವಿಕಿರಣ ನಾಕೋಡ**

ಸಂದರ್ಶಕ : ತಾವು ಪಂಡಿತ ಬಸವರಾಜ ಬೆಂಡಿಗೇರಿಯವರಲ್ಲಿ ತಬಲಾ ಶಿಕ್ಷಣವನ್ನು ಯಾವಾಗ ಪ್ರರಂಭ ಮಾಡಿದ್ರಿ?

ರಾಚಯ್ಯನವರು: ನಾನು ಪಂಡಿತ ಬಸವರಾಜ ಬೆಂಡಿಗೇರಿಯವರ ಹತ್ತಿರ ತಬಲಾ ಶಿಕ್ಷಣ ಪ್ರಾರಂಭ ಮಾಡಿದ್ದು ೧೯೭೧ನೇ ಇಸ್ವಿ. ಇಲ್ಲೆ ನಾ ಫಸ್ಟ ಇಯರ್ ಪಿ.ಯು.ಸಿ. ಗ ಬಂದಾಗ ಕರ್ನಾಟಕ ಕಾಲೇಜನ್ಯಾಗ ಅವರ ಹತ್ತಿರ ನಂದ ಶಿಕ್ಷಣ ಪ್ರಾರಂಭವಾಯ್ತು. ಅದೇ ರೀತಿ ಬಿ.ಎ. ಮುಗ್ಯುವರೇಗನೂ ಅಂದರ ಸತತ ಒಂದ ಐದಾರ ವರ್ಷ ಕಾಲ ಅವರ ಹತ್ತಿರ ಅಭ್ಯಾಸ ಮಾಡಿದೆ. ಅನಂತರನೂ ಮತ್ತೊಂದು ಮೂರನಾಕ ವರ್ಷ ಅವ್ರಹತ್ತರ ಅಭ್ಯಾಸ ಮಾಡಿದೆ.

ಸಂದರ್ಶಕ : ಯಾವ ಯಾವ ಘರಾಣೆಗಳನ್ನು ತಾವು ಅಭ್ಯಾಸ ಮಾಡಿದ್ರಿ?

ರಾಚಯ್ಯನವರು : ಅವರು ಮೂಲತಃ ಮಹಬೂಬ ಸಾಹೇಬರ ಶಿಷ್ಯರು ಮೆಹಬೂಬ ಸಾಹೆಬ್ರು ಜುಗನಾ ಖಾನರ ಶಿಷ್ಯರು. ಇವರ್ದು ಮೂಲ ಘರಾಣಾ ದಿಲ್ಲಿ ಮತ್ತು ಪೂರಬ.

ಸಂದರ್ಶಕ : ಅಜರಡಾನೂ ನುಡಿಸ್ತಿದ್ರಂತ ಹೇಳತಾರಲ್ರಿ ಇವರು?

ರಾಚಯ್ಯನರು: ಹಂಗ ಅವರು ಎಲ್ಲಾ ಘರಾಣೆದ್ದು ಶೈಲಿ ಅವ್ರಿಗ ಗೊತ್ತಿತ್ತು ಮತ್ತ ನುಡಿಸಿನೂ ನುಡುಸ್ತಿದ್ರು ಆದರ ಅವರು ಒರಿಜಿನಿಲ್ ದಿಲ್ಲಿ ಮತ್ತು ಪೂರಬ ವಿಶೇಷ ಬಾರಸ್ತಿದ್ರ ಅವರು ಹಾ ಇನ್ನ ಅವರ ಶಿಕ್ಷಣ ಕೊಡು ರೀತಿ ಬಗ್ಗೆ ಸ್ವಲ್ಪ ಹೇಳಬೇಕಂತಂದ್ರ ಅವರು ಬಹಳ ಸರಳ ವ್ಯಕ್ತಿ. ಅವರ್ಹತ್ತರ ಎಳ್ಳಷ್ಟೂ ನಾನು ದೊಡ್ಡ ಪಂಡಿತ ಅಥವಾ ನಾ ಸೊಕ್ಕಿನಿಂದ ಇರಬೇಕು, ಮತ್ತ ಶಿಷ್ಯರ ಕೂಡ ಬಹಳ ಒಂದತರಹ ರಿಜರ್ವ್ವಿರಬೇಕು ಎನ್ನು ಮನೋಭಾವನೆ ಎಂದೂ ತೋರಸ್ತಿದ್ದಿಲ್ಲ. ಬಹಳ ಸರಳ ರೀತಿಯಿಂದ ಅವರು ತಮ್ಹತ್ತರ ಏನ ವಿದ್ಯೆ ಇದ್ದಿದ್ದೆನ್ನೆಲ್ಲಾ ಬ್ಹಾಳ ಮುಕ್ತ ಮನಸ್ಸಿನಿಂದಾ ಶಿಷ್ಯರಿಗೆ ಕೊಡ್ತಿದ್ರು ಮತ್ತ ನಮಗ ಅವರ್ದು ಸಹವಾಸ ಬ್ಹಾಳ ದಿನಾ ಬಂದದ್ರಿಂದ ಕೆಲುವರ್ಷ ಅವರ ಜೊತೆಗನ ನಾನ ನೌಕರಿ ಮಾಡಿದೆ ಹೀಗಾಗಿ ಅವರ ಸಹವಾಸ ಬ್ಹಾಳ ಬಂದಿದ್ರಿಂದ ಹೆಚ್ಚಿನ ಉಪಯೋಗ ಅವರಿಂದ ನನಗಾಯ್ತು ತ ಹೇಳಬಹುದು.

ಸಂದರ್ಶಕ: ಇವರ ಕಲೆ ಬಗ್ಗೆ ತಮಗ ಏನ್ರ ಹೇಳುದಿದೆ ಏನ್ರಿ?

ರಾಚಯ್ಯನವರು: ಹಾ ಇನ್ನ ಅವರು ನುಡಿಸುವ ರೀತಿ ಅವರು ಸಾಥ-ಸಂಗತ ಮಾಡುವ ಚತುರತೆ ಬಗ್ಗೆ ಒಂದೆರಡ ಮಾತ ಹೇಳಬೇಕಂದ್ರ ಅವರಿಗೆ ಸಂಗೀತದ ಜ್ಞಾನ ಬ್ಹಾಳ ಇತ್ತು. ಮತ್ತ ಅವರು ನಮ್ಮುಂದ ರಗಡಸಲ ಹೇಳಿದ್ರು ಹಾರ್ಮೋನಿಯಂನೂ ಅವರ ಮೊದಲ ಕಲಿತಿದ್ರಂತ, ಹಿಂಗಾಗಿ ಅವರಿಗೆ ಸ್ವರ ಜ್ಞಾನ, ಸಂಗೀತ ಜ್ಞಾನ, ಎಷ್ಟೋ ಚೀಜಗಳನ್ನು ಸಹಿತ ಅವರ ಬಾಯಿಪಟ ಹೇಳ್ತಿದ್ರು. ಹೀಗಿರುವುದ್ರಿಂದ ಅವರ ಸಾಥ-ಸಂಗತ ಬ್ಹಾಳ ಚೆನ್ನಾಗಿ ಮಾಡ್ತಿದ್ರ. ಅದರಲ್ಲಿನೂ

ಉಳಿದೆಲ್ಲ ತಬಲಾ ವಾದಕರು ಸಾಥ-ಸಂಗತ ಮಾಡುವ ರೀತಿ ನ ಬ್ಯಾರೆ ಇವರ ಸಾಥ-ಸಂಗತ ಮಾಡು ರೀತಿನ ಬ್ಯಾರೆ. ಈ ತರ ಸಾಥ-ಸಂಗತ ಮಾಡುವವರು ನಮ್ಮ ದೇಶದಲ್ಲಿ ಕೆಲವೇ ಜನ ಸಿಗಬಹುದಂತ ಹೇಳಬಹುದು. ಅವರ್ದ ಸಾಥ-ಸಂಗತ ವೈಶಿಷ್ಟತೆ ಏನಂದ್ರ ಅದರಲ್ಲಿಯೂ ವಿಶೇಷವಾಗಿ ಲಯಕಾರಿ ಪ್ರಾರಂಭವಾದಾಗ. ಈಗ ಉದಾಹರಣೆಗೆ ಹೇಳಬೇಕಂದ್ರ ಈಗ ಯಾವದಾದ್ರು ಒಂದ ತಾಲ ನಡಿದಿತ್ತಂತ ನಾವು ಭಾವಿಸೋಣ. ಇಗ ಸವಾರಿ ತಾಲ ಸಾಥ-ಸಂಗತ ಮಾಡ್ತಾರಂತ ನಾವೀಗ ಭಾವಿಸೋಣ. ಅವರು ಮುಖ್ಯ ವಾದಕರು ಅಥವಾ ಗಾಯಕರು ಈಗ ಒನ್ನೇ ಮಾತ್ರಾದಿಂದನ ಲಯಕಾರಿ ಪ್ರಾರಂಭ ಮಾಡಿದ್ರ ತಕ್ಷಣ ಅವರ್ಧಿಂದ ಫಾಲೊ ಮಾಡಿ ಬಿಡ್ತಿದ್ರಿವರು. ಒನ್ನೆ ಮಾತ್ರದಿಂದನ ಫಾಲೊ ಮಾಡ್ತಿದ್ರು. ಆಮೇಲೆ ಎರಡನೇ ಮಾತ್ರಾದಿಂದನ ಅವರ ಒಂದ್ವೆಳೆ ಲಯಕಾರಿ ಪ್ರಾರಂಭ ಮಾಡಿದ್ರ ತಕ್ಷಣ ಅವರು ಫಾಲೊ ಮಾಡಬಿಡ್ತಿದ್ರು.

ಸಂದರ್ಶಕ : ಅಂದರ ಅವರ್‍ಯಾ ಲಯಕಾರಿದೊಳಗ ಹೊಂಟಾರ ಅದ ಲಯದೊಳಗ ಇವರ ಹೊಂಟಬಿಡ್ತಿದ್ರು?

ರಾಚಯ್ಯನವರು : ಅಂದರ ಫಿಕ್ಸ ಇರ್ತಿದ್ದಿಲ್ಲಾ ಇಗ ಅನೇಕ ತಬಲಾ ವಾದಕರ ಏನ ಮಾಡ್ತಾರ ನಾಕ ಮಾತ್ರಾ ಪೀಸು, ಎಂಟ ಮಾತ್ರಾ ಪೀಸು ರೇಡಿ ಮಾಡ್ಕೊಂಡ ಸಾಥ-ಸಂಗತ ಮಾಡ್ತಾರ. ಇವರ್ದು ಹಂಗಿದ್ದಿದ್ದಿಲ್ಲಾ ರೆಡಿ ಆಗಿಂದಾಗ ಅಂದರ ಅವರ ಕ್ಯಾಲ್ಕ್ಯುಲೇಶನ್ ಬ್ಹಾಳ ವಿಚಿತ್ರ ಇತ್ತ ಮತ್ತ ನಾವು ಕೈಯಲ್ಲಿ ಮಾತ್ರಾ ಹಿಡಿಕೊಂಡ ಕುಂತ್ರ ಕರೆಕ್ಟ ಅವ್ರು ಸಮ್ಮಿಗ ಬರ್ತಿದ್ರ. ಎಂದೂ ಒಂದ ಕುದಲ ಎಳಿ ಅಷ್ಟ ಹೆರ ಪೆರ ಆಗ್ತಿದ್ದಿಲ್ಲಾ. ನಮಗ ಆಶ್ಚರ್ಯ ಆಕ್ಕಿತ್ತು ಇವರ ಫಾಲೊ ಮಾಡಿದ್ಕುಳ್ಳೆಂತಂದ್ರ ಏನ ಕೌಂಟ ನ್ಯಾಗ ಏನಾದ್ರು ಹೆಚ್ಚ ಕಡಿಮೆ ಆಗಬಹುದು ಅಥವಾ ಲಯದಲ್ಲಿ ಏನಾದ್ರ ಹೆಚ್ಕಡಿಮೆ ಯಾಗಬಹುದೆನೊ ಅಂತ ಹೇಳಿ ವಂತ್ಹರ ಅನಸ್ತಿತ್ತು. ಆದರ ಲಯ ಹಿಡ್ಕೊಂಡ ಕುಂತಾಗ ಏನೇನು ಫರಕಾಗ್ತಿದ್ದಿಲ್ಲ ಕರೆಕ್ಟ ಸಮ್ಮಿಗ ಬರ್ತಿದ್ರು ಮತ್ತ ಹಂಗ ಐದ್ಯೆದ ಆರಾರ ಆವರ್ತನ ಸಹಿತ ಅವರನ್ನ ಫಾಲೊ ಮಾಡ್ಕೊಂಡು ಕಡಿಗ ಸಮ್ಮಿಗ ಬರ್ತಿದ್ರು ಇದು ಅವರ ಸಾಥ-ಸಂಗತದ ವಿಶೇಷ ಗುಣ ಅಂತ ಹೇಳಬಹುದು.

ಸಂದರ್ಶಕ : ಇವರ ದೇವಧರ ಸ್ಕೂಲನ್ಯಾಗ ಇಂದ್ರಂತ್ರಿ

ರಾಚಯ್ಯನರು: ಹಾ ದೇವಧರ ಸ್ಕೂಲಿನಲ್ಲಿ ಅವರ ನಮ್ಮೆದರಿಗೆ ಬಹಳಷ್ಟ ಸಲೆ ಹೇಳಿದ್ರವರು ನಾವವರನ್ನ ಪ್ರಶ್ನೆ ಕೇಳ್ತಿದ್ವಿ. ಈ ತರ್‍ಹಾ ನೀವ ಸಾಥ-ಸಂಗತ ಮಾಡುದು ಏನಿದು ವಿಶೇಷ ಅಂತ ಕೇಳಿದಾಗ ಇಲ್ಲಾ ನಾ ಬಾಂಬೆದಾಗ ದೇವಧರ ಸ್ಕೂಲನ್ಯಾಗ ನಾನು ಕೆಲುವರ್ಷ ಇದ್ದೆ ಅಲ್ಲೆ ಬಹಳ ದೊಡ್ಡ ದೊಡ್ಡ ಕಲಾವಿದರ ಜೊತೆಗೆ ನನಗ ಸಂಪರ್ಕ ಬಂತು ಹೀಗಾಗಿ ನನಗ ಅದ ಅನುಕೂಲಾತು ಅಂತ ಅವರ ಅನೇಕ ಸಲ ನನಮುಂದ ಹೇಳಿದ್ದ ಗೊತ್ತಿದೆ.

ಸಂದರ್ಶಕ : ಎಷ್ಟದಿನ ತಾವು ಅವರ ಕಡೆ ಕೂಡಿದ್ರಿ ಗುರುಗಳ ಕಡೆ?

ರಾಚಯ್ಯನವರು: ಇನ್ನ ಅವರ ಜೊತೆಗೆ ನಾವು ಕೆಲವು ಕಾಲ ಸಹದ್ಯೋಗಿಯಾಗಿ ಅಂದ್ರ ಅವರ ಜೊತೆಗೆನ ಇದ್ದು ನಮಗ ಅವರ ಸೇವೆ ಮಾಡು ಅವಕಾಶ ಸಿಕ್ತು. ಅದ ನಮ್ಮ ಭಾಗ್ಯ ಅಂತ ಹೇಳಬಹುದು. ಅವರು ಬಹಳ ವಂತರ್ಧ ನಮಗ ಗುರು ಶಿಷ್ಯರಂಗ ಕಾಣ್ತಿದ್ದೇ ಇಲ್ಲ. ಮಿತ್ರರ ಜೊತೆಗೆ ಇದ್ದಂಗ ಎಷ್ಟೋ ಸಲ ನಮ್ಮ ಹೆಗಲ ಮ್ಯಾಲ ಅವರು ಕೈ ಹಾಕ್ಕೊಂಡ ಅಡ್ಡಾಡಿದ್ದು ಉಂಟು. ಬ್ಹಾಳ ಸರಳ ಜೀವಿ ಅಂತ ಹೇಳಬಹುದು.

ಸಂದರ್ಶಕ: ಅಂದರ ಇವರು ತಬಲಾ ನುಡಿಸುವಾಗ ಸಾಥಿಗ ಕುಂತಾಗ ತಂಬೂರಿ ಆತು, ತಬಲಾ ಆತು ಮೊದಲ ತಂಬೂರಿ ಗಿಂಬೂರಿ ಸರಿ ಕುಡ್ಯಾವೊ ಇಲ್ಲೊ ಎಲ್ಲಾ ತಾವ ನೊಡ್ತಿದ್ರಂತ.

ರಾಚಯ್ಯನವರು: ಅವರು ಸ್ವತಃ ಪರಫೆಕ್ಟ ತಂಬೂರಿ ಕೂಡಸ್ತಿದ್ರವರು ಸ್ವಲ್ಪ ಏನಾದ್ರು ಬೇಸೂರಾದ್ರ ತಕ್ಷಣ ನಿಂತು ತಂಬೂರಿ ಬೆಸೂರು ಆಗೇತಿ ಅದನ ಕೂಡ್ಸಾಸಕರ ಹೇಳವ್ರು? ಇಲ್ಲಾಂದ್ರ ತಾವರ ಕೂಡಸ್ತಿದ್ರು. ಸ್ವತಃ ತಾನಪುರ ಅವರು ಬಹಾಳ ಛಲೊ ಟಿವನಿಂಗ ಮಾಡ್ತಿದ್ರು.

ಸಂದರ್ಶಕ: ಗಜಾನನ ಬುವಾ ಜೋಶಿಯವರ ಕಡೆ ಬ್ಹಾಳ ನುಡಿಸ್ತಿದ್ರೆನ್ರಿವರು?

ರಾಚಯ್ಯನವರು: ನನಗ ಒಂದೆರಡ ಸಲ ಗಜನಾನರಾವ ಜೋಶಿಯವರ ಕೂಡ ಸಾಥ-ಸಂಗತ ಮಾಡಿದ್ದ ನನಗ ಇಲ್ಲಿ ಕೇಳಾಕ್ಕ ಶಿಕ್ತಿ.

ಸಂದರ್ಶಕ : ಎಷ್ಟನೇ ಇಸ್ವಿಯಲ್ಲಿ

ರಾಚಯ್ಯನವರು : ಸುಮಾರದು ೧೯೭೭ ಅಥವಾ ೭೮ ಇರಬಹುದು ಅನಸ್ತದ. ನನಗ ಅದೊಂದು ವಿಶೇಷ ಅನುಭವ ಅಂತ ಹೇಳ್ಳಿಕ್ಕೆ ಆಶ್ಚರ್ಯ ಆಗ್ಲಿಕ್ಕಿಲ್ಲ. ಆವಾಗ ಗಜಾನನ ರಾವ ಜೋಶಿ ಸಹಿತ ಲಯದಲ್ಲಿ ಅಷ್ಟೇ, ಇವರಷ್ಟೇನ ಚತುರರಿದ್ರು. ಅವರಿಗೆ ಇವರಿಗೆ ಲಯಕಾರಿ ನಡದದ್ದ ನೋಡಿದ್ರ ನಮಗೆಲ್ಲಾ ಬ್ಹಾಳ ಗಾಬರಿ ಆಗಬಿಡ್ತು ನಮಗ ಐದ್ಯೆದ ಆರಾರ ರೌಂಡ ಸಮ್ಮಿಗೆ ಬರ್ತಿದ್ದಿಲ್ಲ ಬರೆ ಇವರಿಗೆ “ಬೊ” (ಕಮಾನ) ತೋರಿಸಿಬಿಡ್ತಿದ್ರವರು. ನಾವು ಹಿಂಗ ಏಣಿಸ್ಕೊಂತ ಕೂಡವರು.

ಸಂದರ್ಶಕ : ವಾಯಲಿನ್ “ಬೊ” ತೊರಸ್ತಿದ್ರ.

ರಾಚಯ್ಯನವರು : ಸಮ ಬಂದಾಗ ಹಿಂಗ “ಬೊ” ತೊರಿಸ್ಬಿಡ್ತಿದ್ರವರು. ಆದೊಂದು ಬಹಳ ಒಳ್ಳೆ ನಮಗ ಅನುಭವ ಅಂತ ಹೇಳಬಹುದು. ಯಾಕಂದ್ರ ಗಜಾನನ ರಾವ ಜೋಶಿ ಸಹಿತ ಲಯದಲ್ಲಿ ಅಷ್ಟೇ ಅವರಿಗೆ ಪ್ರಭುತ್ವ ಇತ್ತು ಮತ್ತ ಇವರಂಗನ ಅವರ್ದು ಕ್ಯಾಲಿಕ್ಯೂಲೇಶನ್ ಅದೇ ರೀತಿ ಇತ್ತು. ಇಬ್ಬರದು ಕ್ಯಾಲಕ್ಯೂಲೇಶನ್ ಒಂದ ಇತ್ತು.

ಸಂದರ್ಶಕ : ಎಲ್ಲಾ ಬಾಕಿ ತಬಲಜಿ ಹೆದರ್ತಿದ್ರಂತ್ರಿ ಅವರಗ. ಅಂಥ ಒಂದ ಲಯಕಾರಿ ಮನುಷ್ಯಾ ಅವರಾಗಿದ್ರಂತ್ರಿ.

ರಾಚಯ್ಯನವರು : ಭಾರಿ ಲಯಕಾರಿ ಇದ್ರವರ. ಅದೇ ರೀತಿ ಇನ್ನೊಬ್ಬ ಕಲಾವಿದರೆಂದರ ಇವರ ಜೊತೆಗೆ ನಾವು ಕೇಳಿದ್ವಿ. ಗೋವಾದವರ ಜಲತರಂಗ ನುಡಿಸ್ತದ್ರಲ್ಲ ಮಂಗೇಶರಾವ್ ಗೋವೆಕರ್.

ಹಾ ನಮಗ ಖರೆ ಅಂತಂದ್ರ ನಮ್ಮ ಗುರುಗಳಿಗೆ ಇಂಥಾವರ ಯಾರು ಕೂಡ್ಲೇ ಇಲ್ಲಾ ಅಂತ ಅನ್ನುದೊಂದು ಇದ ಇತ್ತ ನಮಗ ಅವರ ಜೊತೆ ಇವರ ನುಡಿಸಿದ್ದ ನೋಡಿದ್ರ ನನಗಂತೂ ನಮ ಗುರುಗಳಿಗ ಇವತ್ತ ಬರಬ್ಬರ ಒಬ್ರ ವ್ಯಕ್ತಿ ಸಿಕ್ಕಾರ ಅಂತ ಅನಸ್ತ. ನನಗ ಒಂದೆರಡ ಸಲ ಪ್ರೋಗ್ರಾಮ ಕೇಳಿದಿವು.

ಸಂದರ್ಶಕ : ಯಾವಾಗರಿ ಇದು?

ರಾಚಯ್ಯನವರು : ಅದು ಸುಮಾರು ೭೮-೭೯ ಇರಬೇಕು. ಇಲ್ಲಿ ನಮಗ ಮ್ಯೂಜಿಕ ಕಾಲೇಜನ್ಯಾಗ ಒಮ್ಮೆ ಇತ್ತ. ಆಮ್ಯಾಲ ಮುಂದ ಅಲ್ಲಿ ಭಾರತೀಯ ಸಂಗೀತ ವಿದ್ಯಾಲಯದಾಗನೂ ಇವರ ಕಾರ್ಯಕ್ರಮ ನಮಗ ಕೇಳಾಕ ಸಿಕ್ತ.

ಸಂದರ್ಶಕ : ಧಾರವಾಡನ್ಯಾಗ?

ರಾಚಯ್ಯನವರು : ಹು, ಅವರದು ಇವರಂಗನ ಅವರದು ಲಯಕಾರಿ

ಸಂದರ್ಶಕ : ಆಮ್ಯಾಲೆ ಇವರ ಮನ್ಸೂರವರ ಕಡೆ ಎಲ್ಲಾ ನುಡಿಸಿದಾರಿ?

ರಾಚಯ್ಯನವರು: ಹಾ, ಮನ್ಸೂರವರ ಜೊತೆಗನೂ ಇವರದು ಲಯಕಾರಿ ವಿಶೇಷ ಕೇಳು ಹಂಗಿತ್ತು. ಯಾಕಂದ್ರ ಮಲ್ಲಿಕಾರ್ಜುನ ಮನ್ಸೂರವರದಂತೂ ಅವರ ಲಯಕಾರಿ ಬಗ್ಗೆ ಪ್ರಶ್ನೇನ ಇಲ್ಲಾ ಅವರೂ ಲಯಕಾರಿ ಮಾಡುದರಲ್ಲಿ ಅಷ್ಟೇ ಚತುರತೆಯಿಂದ ಲಯಕಾರಿ ಮಾಡ್ತಿದ್ರ ಇವರ ಫಲೋ ಫಾಲೊ ಮಾಡ್ತಿದ್ರ.

ಸಂದರ್ಶಕ : ಆಮೇಲೆ ಗುರುಗಳ ಮತ್ತಿಲ್ಲೆ ಕರ್ನಾಟಕ ಕಾಲೇಜದಾಗೂ ಸ್ವಲ್ಪ ದಿನ ಇಲ್ಲಿ ಅಧ್ಯಾಪಕರಾಗಿದ್ರು ಅಂತ ಕೇಳಿದೆ.

ರಾಚಯ್ಯನವರು : ಸ್ವಲ್ಪ ದಿನ ಯ್ಯಾಕ ಸುಮಾರು ದಿವಸ ಇಲ್ಲೆ ತಬಲಾ ಉಪನ್ಯಾಸಕರಾಗಿ ಸೇವೆ ಸಲ್ಸ್ಯಾರ. ಸುಮಾರ ಒಂದ ಹದಿನೈದ ಹದ್ನಾರ ವರ್ಷ ಸೇವೆ ಸಲ್ಸಿದ್ರ.

ಸಂದರ್ಶಕ : ಸಾಕಷ್ಟು ಶಿಷ್ಯರನ್ನು ತಯಾರ ಮಾಡ್ಯಾರ.

ರಾಚಯ್ಯನವರು : ಅವರ ಅನೇಕ ಶಿಷ್ಯಾರ ತಯಾರಾಗಿದ್ದಾರ ಮತ್ತವರ ಬ್ಹಾಳ ಸರಳ ರೀತಿಯಿಂದ ವಿದ್ಯಾಭ್ಯಾಸ ಹುಡುಗರಿಗ ಹೇಳ್ತಿದ್ರ. ಹೀಗಾಗಿ ಅವರ ಶಿಷ್ಯ ಬಳಗ ಬ್ಹಾಳ ಇದೆ.

ಸಂದರ್ಶಕ : ಆಮೇಲೆ ಇವರ ಸಾಥ-ಸಂಗತ ನೃತ್ಯದ ಜೊತೆಗೆ ಮಾಡ್ತಿದ್ರಂತ ಕೇಳಿದೆನ್ರಿ.

ರಾಚಯ್ಯನವರು : ನೃತ್ಯದ ಜೊತೆಗೆ ಸಾಥ-ಸಂಗತ ಮಾಡಿದ್ರಂತ ನಾನು ಕೇಳಿನಿ ಆದರ ನಮಗೆ ನೋಡಾಕ ಸಿಗಲಿಲ್ಲ ಬಾಂಬೆದಾಗಿದ್ದಾಗ ಏನಾದ್ರು ಸಾಥ-ಸಂಗತ ಮಾಡಿರಬೇಕ.

ಸಂದರ್ಶಕ : ನೃತ್ಯದ ಬೋಲುಗಳನ್ನು ಕೆಲವೊಂದು ನುಡಸ್ತಿದ್ರಿವರು.

ರಾಚಯ್ಯನವರು : ಹು, ಬರತಿತ್ತ ಇಗ ಮತ್ತ ಈ ಪೂರಬ ಸ್ಟೈಲೆಲ್ಲಾ ನೃತ್ಯದ ಬೋಲ ಅವ. ಪೂರಬ ಘರಾಣಾ ಏನ ಅದ ಅಲ್ಲಾ ಪೂರಾ ನೃತ್ಯದ ಘರಾಣೆ ಅದ.

## ೧೩. ಶ್ರೀ. ಎಸ್. ಸಿ. ಬಳ್ಳೂರ (ತಬಲಾ ವಾದಕರು) :

ಪಂ. ಬಸವರಾಜ ಬೆಂಡಿಗೇರಿಯವರಲ್ಲಿ ೧೫ ವರ್ಷಗಳ ಸುಧೀರ್ಘವಾದ ಆತ್ಮೀಯ ಶಿಷ್ಯತ್ವದೊಂದಿಗೆ ವಿದ್ಯ ಕಲಿತ ನಾನು ಕೇವಲ ಒಂದೆರಡು ಪುಟಗಳಲ್ಲಿ ಅವರ ಬಗ್ಗೆ ಅನುಭವಗಳನ್ನು ಸೀಮಿತಗೊಳಿಸಿಕೊಳ್ಳಲು ಅಸಾಧ್ಯವೆಂಬುದು ಒಂದಂಶವಾದರೆ, ಅನುಭವಗಳೆಲ್ಲವನ್ನು ಅಕ್ಷರಗಳಲ್ಲಿ ಏಕಕಾಲಕ್ಕೆ ಮೂಡಿಸಲು ನಿಂತದ್ದು ಮತ್ತೊಂದು ಅಂಶ. ಈ ಎರಡು ಮಿತಿಗಳಲ್ಲಿ ಅವರ ತಬಲಾ ವಿದ್ಯೆಯ ವೈಶಿಷ್ಟ್ಯದ ಅಂಶಗಳನ್ನು ಪ್ರಸ್ತಾಪಿಸಲು ಇಚ್ಚಿಸುತ್ತೇನೆ.

ಕರ್ನಾಟಕದ ಸಂಗೀತ ಕ್ಷೇತ್ರದ ದಿಗ್ಗಜರಲ್ಲಿ ಪಂ. ಬಸವರಾಜ ಬೆಂಡಿಗೇರಿಯವರೂ ಒಬ್ಬರು. ಪ್ರಸಿದ್ಧ ಗಾಯಕರಾದ ಪದ್ಮವಿಭೂಷಣ ಡಾ. ಮಲ್ಲಿಕಾರ್ಜುನ ಮನಸ್ಸೂರ, ಪದ್ಮವಿಭೂಷಣ ಗಂಗೂಬಾಯಿ ಹಾನಗಲ್, ಪಂ. ಭೀಮಸೇನ ಜೋಶಿ, ಪಂ ಕುಮಾರ ಗಂಧರ್ವ ಇಂಥವರ ಸಾಲಿನಲ್ಲಿ ನಿಲ್ಲಬಲ್ಲ ಪಾಂಡಿತ್ಯವನ್ನು ಶ್ರೀ. ಬಸವರಾಜ ಬೆಂಡಿಗೇರಿಯವರು ಹೊಂದಿದ್ದಾರೆಂಬುದರಲ್ಲಿ ಎರಡುಮಾತಿಲ್ಲ. ಆದರೆ ಅವರಿಗೆ ಸಮಾಜದಿಂದಾಗಲಿ ಅಥವಾ ಸರ್ಕಾರದಿಂದಾಗಲಿ ಗೌರವ, ಮರ್ಯಾದೆಗಳು ಸಿಗದೇ ಇರುವದು ನಿಜಕ್ಕೂ ವಿಷಾದನೀಯ ಸಂಗತಿಯಾಗಿದೆ.

ಒಮ್ಮೊಮ್ಮೆ ನಾನು ಹೀಗೇಕೆ ಎಂದು ಯೋಚಿಸಿದಾಗ ನನಗೆ ಒಂದು ಕಾರಣ ಸ್ಪಷ್ಟವಾಗುತ್ತದೆ. ಅದೇನೆಂದರೆ, ಅವರು ಒಂದು ವೇಳೆ ತಬಲಾ ವಾದನದಲ್ಲಿ ಮಾಡಿದ ಸಾಧನೆಯನ್ನು ಹಾಡುಗಾರಿಕೆಯಲ್ಲಿ ಮಾಡಿದ್ದರೆ ಅವರು ಸರಳವಾಗಿ ಗೌರವ ಸನ್ಮಾನಗಳನ್ನು ಪಡೆಯುತ್ತಿದ್ದರೇನೊ? ಎಂದು ಅವರು ಗತಿಸಿ ಸುಮಾರು ನಾಲ್ಕು ವರ್ಷಗಳಾದರೂ ಸಂಗೀತ ರಸಿಕರ ಮನದಲ್ಲಿ ಅಚ್ಚಳಿಯದೇ ಉಳಿದಿದ್ದಾರೆಂಬ ಸಂಗತಿ ಸಮಾಧಾನಕರವಾಗಿದೆ. ಅದು ಅವರಿಗೆ ಸಂದ ವಿಶಿಷ್ಟ ಗೌರವೆಂದೇ ಭಾವಿಸಬೇಕು.

ಕರ್ನಾಟಕದಲ್ಲಿ ತಬಲಾ ವಾದನದ ಬಗ್ಗೆ ವಿಶೇಷ ಆಸಕ್ತಿ ಮೂಡಿಸಿದವರು. ಪಂ.ಬಸವರಾಜ ಬೆಂಡಿಗೇರಿಯವರು ಎಂಬುದು ಯಾರೂ, ಯಾವತ್ತೂ ಮರೆಯಲಾರದ ಸಂಗತಿಯಾಗಿದೆ. ಇಂದು ಕರ್ನಾಟಕದಲ್ಲಿ ತಬಲಾ ನುಡಿಸುವವರ ಸಂಖ್ಯೆ ಅಧಿಕಪ್ರಮಾಣ ಬೆಳೆದಿರುವದಕ್ಕೆ ಅವರೇ ಕಾರಣ. ಹಾಗೂ ಕರ್ನಾಟಕದಲ್ಲಿ ತಬಲಾ ನುಡಿಸುವ ಅಗ್ರಮಾನ್ಯ ಕಲಾವಿದರೆಲ್ಲರೂ ಅವರ ಶಿಷ್ಯರೇ ಆಗಿದ್ದಾರೆ. ಇದಕ್ಕೆ ಕಾರಣ ಅವರು ತಮ್ಮ ವಿದ್ಯೆಯನ್ನು ನಿರ್ವಂಚನೆಯಿಂದ ಶಿಷ್ಯರೆಲ್ಲರಿಗೂ ಹಂಚಿದ್ದಾರೆ. ಇವರ ಇಂಥ ವ್ಯಕ್ತಿತ್ವ ಸಂಗೀತ ಕ್ಷೇತ್ರದ ವಿದ್ವಾಂಸರಿಗೆ ಅನುಕರಣೀಯವಾದದ್ದು.

ಪಂ. ಬಸವರಾಜ ಬೆಂಡಿಗೇರಿಯವರು ಕಲಾಕಾರರ ಮನೆತನದಲ್ಲಿ ಹುಟ್ಟಿದವರಲ್ಲ. ಮೂಲತಃ ನೇಕಾರಿಕೆ ಉದ್ಯೋಗದ ಮನೆತನದಲ್ಲಿ ಹುಟ್ಟಿದವರು. ಹುಟ್ಟಿನಿಂದ ಇವರಿಗೆ ಕಣ್ಣಿನ

ದೋಷವಿದ್ದುದರಿಂದ ಇವರ ಶಿಕ್ಷಣ ನಾಲ್ಕನೇ ವರ್ಗದ ವರೆಗೆ ನಡೆಯಲು ಮಾತ್ರ ಸಾಧ್ಯವಾಯಿತು. ಕಾರಣ ಅವರ ಕಣ್ಣಿನ ದೃಷ್ಟಿ ಮತ್ತಷ್ಟು ಕ್ಷೀಣಿಸತೊಡಗಿತು. ತಂದೆಯವರಿಗೆ ಮಗನ ಭವಿಷ್ಯದ ಬಗ್ಗೆ ಚಿಂತೆ ಹೆಚ್ಚುತ್ತಿತ್ತು. ಪಂ. ಬಸವರಾಜ ತಂದೆಯವರು ಅಲ್ಪ, ಸ್ವಲ್ಪ ತಬಲಾವನ್ನು ಕಲಿತಿದ್ದರು. ಆ ವಿದ್ಯೆಯನ್ನು ತಮ್ಮ ಮಗನಿಗೆ ಕಲಿಸಿ ನೋಡೋಣವೆಂದು ಕಲಿಸತೊಡಗಿದರು. ಕಲವೇ ದಿವಸಗಳಲ್ಲಿ ಮಗನ ಅದ್ಭುತ ಪ್ರಗತಿಯನ್ನು ಕಂಡು ದಂಗಾಗಿ ಹೋದರು. ಆಗ ಅವರಿಗೆ ಮಗನಿಗೆ ಒಳ್ಳೆಯಗುರುಗಳನ್ನು ಹುಡುಕಿ ತಬಲಾ ವಿದ್ಯೆಯನ್ನು ಕೊಡಿಸಿದರೆ ಇವನೊಬ್ಬ ಮಹಾನ ತಬಲಾವಾದಕನಾಗುತ್ತಾನೆಂಬ ವಿಶ್ವಾಸ ಮೂಡಿಸಿಕೊಂಡರು. ಇದರ ಪರಿಣಾಮವೇ ಬಸವರಾಜರು ಉಸ್ತಾದ ಮೆಹಬೂಬ ಖಾನ ಸಾಹೇಬ ಮಿರಜಕರ ಇವರಲ್ಲಿ ಶಿಷ್ಯತ್ವವನ್ನು ಸ್ವೀಕರಿಸಿ ತಮ್ಮ ತಬಲಾ ಅಭ್ಯಾಸವನ್ನು ಮುಂದುವರಿಸಿದರು. ತಬಲಾ ವಿದ್ಯೆಯಲ್ಲಿ ಅಪಾರ ಪಾಂಡಿತ್ಯವನ್ನು ಹೊಂದಿದ ಮೆಹಬೂಬ ಖಾನಸಾಹೇಬರಲ್ಲಿ ಕಲಿಯಲು ಪ್ರಾರಂಭಿಸಿದ ಕಲವೇ ವರ್ಷಗಳಲ್ಲಿ ಇವರು ಗುರುಗಳ ಅಚ್ಚುಮೆಚ್ಚಿನ ಶಿಷ್ಯರಾಗಿ ತಬಲಾ ಕ್ಷೇತ್ರದಲ್ಲಿ ತಮ್ಮದೇ ಆದ ವಿಶಿಷ್ಟ ಸ್ಥಾನವನ್ನು ಪಡೆದರು.

ತಬಲಾ ವಿದ್ಯೆಯನ್ನು ಸಾಮಾನ್ಯವಾಗಿ ಎರಡು ಭಾಗಗಳನ್ನಾಗಿ ವಿಂಗಡಿಸುತ್ತಾರೆ. ಸ್ವತಂತ್ರವಾದನ ಒಂದಾದರೆ ಮತ್ತೊಂದು ಸಾಥಸಂಗತ. ಈ ವಿದ್ಯೆಯಲ್ಲಿ ಸ್ವತಂತ್ರವಾದನಕ್ಕೆ ಎಷ್ಟು ಮಹತ್ವಕೊಡಲಾಗಿದೆಯೋ ಅದಕ್ಕಿಂತಲೂ ಸಾಥ-ಸಂಗತಕ್ಕೆ ಹೆಚ್ಚು ಮಹತ್ವ ನೀಡಲಾಗಿದೆ. ಯಾಕೆಂದರೆ ಹಿಂದುಸ್ತಾನಿ ಸಂಗೀತದಲ್ಲಿ ಹಾಡುಗಾರಿಕೆ ಇರಲಿ ಅಥವಾ ಯಾವದೇ ವಾದ್ಯವಾದನವಿರಲಿ, ಅದಕ್ಕೆ ತಬಲಾ ಸಾಥ-ಸಂಗತ ಇರಲೇಬೇಕು. ಹೀಗಾಗಿ ತಬಲಾ ವಾದ್ಯವು ಸಾಥಿವಾದ್ಯವೆಂದೇ ಬೆಳೆದು ಬಂದಿದೆ. ಸಾಮಾನ್ಯವಾಗಿ ತಬಲಾ ವಾದಕರು ತಬಲಾ ಸ್ವತಂತ್ರವಾದನದಲ್ಲೊ, ಅಥವಾ ಸಾಥ-ಸಂಗತದಲ್ಲೊ ಯಾವದಾದರೊಂದರಲ್ಲಿ ವಿಷೇಶ ಪರಿಣತಿ ಹೊಂದಿರುತ್ತಾರೆ. ಇವೆರಡರಲ್ಲಿ ಪರಿಣತಿಯನ್ನು ಹೊಂದಿದವರು ಬಹಳ ವಿರಳ. ಅಂಥಹ ವಿರಳ ಕಲಾವಿದರಲ್ಲಿ ಪಂ. ಬಸವರಾಜ ಬೆಂಡಿಗೇರಿಯವರೊಬ್ಬರು. ಈ ಎರಡೂ ಕ್ಷೇತ್ರಗಳಲ್ಲಿ ವಿಶೇಷ ಪ್ರಾವೀಣ್ಯತೆ ಹೊಂದಿದ ಪಂ. ಬಸವರಾಜ ಬೆಂಡಿಗೇರಿಯವರು ಕರ್ನಾಟಕದ ಕಲಾರತ್ನವೇ ಸರಿ.

ತಬಲಾ ಸ್ವತಂತ್ರವಾದನಲ್ಲಿ ಇವರು ಅಭ್ಯಾಸ ಮಾಡಿದ್ದು ಪೂರಬ ಹಾಗೂ ದಿಲ್ಲಿ ಘರಾಣೆಗಳನ್ನು. ಈ ಎರಡೂ ಘರಾಣೆಗಳ ವಿಶೇಷತೆಗಳನ್ನು ತಮ್ಮ ನೈಪುಣ್ಯತೆಯಿಂದ ಮೈಗೂಡಿಕೊಂಡರು. ಯಾವದೇ ಕಲಾವಿದನಿರಲಿ ಅವರ ಪ್ರಯತ್ನದ ಜೊತೆಗೆ ದೈವದತ್ತ ಕೊಡುಗೆಗಳೂ ಮಹತ್ವ ಪಡೆದುಕೊಳ್ಳುತ್ತವೆ. ಪಂಡಿತರಲ್ಲಿ ದೈವದತ್ತ ಕೊಡುಗೆಗಳೆಂದರೆ ಅವರ ಕೈಬೆರಳುಗಳ ರಚನೆ. ಇವರ ಕೈಬೆರಳುಗಳು ತಬಲಾ ನುಡಿಸಲು ಹೇಳಿಮಾಡಿಸಿದಂತಿದ್ದವು. ಇದರೊಂದಿಗೆ ಇವರು ದೈವದತ್ತವಾಗಿ ಪಡೆದ ಲಯದ ಮೇಲಿನ ಪ್ರಭುತ್ವ ಇವೆರಡರ ಜೊತೆಗೆ ಸತತ ಅಭ್ಯಾಸ. ಇವರು ತಬಲಾ ಸೋಲೋ ನುಡಿಸಿದರೆ ನೆರೆದ ಪ್ರೇಕ್ಷಕರು

ಸಮ್ಮೋಹಗೊಳ್ಳುತ್ತಿದ್ದರು. ಇವರಲ್ಲಿಯ ಶಬ್ದಗಳ ಸ್ಪಷ್ಟತೆ, ಆಕರ್ಷಕ ಲಯ ಲಾವಣ್ಯ, ಶಬ್ದಗಳಲ್ಲಿ ಪ್ರಕಟಗೊಳ್ಳುವ ಮಾಧುರ್ಯ ಮತ್ತು ತಯಾರಿ ಈ ನಾಲ್ಕು ಸಂಗತಿಗಳು ಒಟ್ಟುಗೂಡಿದರೆ ವಾದನವು ಪ್ರತಿಯೊಬ್ಬ ಪ್ರೇಕ್ಷಕನ ಮನಸ್ಸಿಗೆ ಮೋಡಿ ಮಾಡುತ್ತದೆ. ಈ ನಾಲ್ಕು ಸಂಗತಿಗಳನ್ನು ಅಭೇಧವಾಗಿ ಮೈಗೂಡಿಸಿಕೊಂಡ ಪಂಡಿತರ ತಬಲಾ ಸೋಲೊ ಎಂದರೆ ಎಲ್ಲ ಸಂಗೀತ ರಸಿಕರು ಸ್ವರ್ಗಾನಂದವನ್ನು ಪಡೆಯುತ್ತಿದ್ದರು.

ಇದರಂತೆ ಸಾಥ-ಸಂಗತದಲ್ಲಿ ಇವರದು ವೈಶಿಷ್ಟಪೂರ್ಣ ಸಾಧನೆ. ಇವರು ಭಾರತದ ಶ್ರೇಷ್ಠ ಸಂಗೀತಗಾರರಿಗೆಲ್ಲ ತಬಲಾ ಸಾಥ ನೀಡಿ ಅವರಿಂದ ಪ್ರಶಂಸಿಸಲ್ಪಟ್ಟಿದ್ದಾರೆ. ಇವರಲ್ಲಿ ಕೆಲವರ ಹೆಸರು ಉಲ್ಲೇಖಾರ್ಹವಾಗಿವೆ. ಉಸ್ತಾದ ಫಯಾಜಖಾನ, ಉಸ್ತಾದ ಅಮೀರ ಖಾನಸಾಹೇಬ, ಡಾ. ಮಲ್ಲಿಕಾರ್ಜುನ ಮನ್ಸೂರ, ಪಂ. ಕುಮಾರ ಗಂಧರ್ವ, ಪಂ. ರವಿಶಂಕರ, ಪಂ. ಬಸವರಾಜ ರಾಜಗುರು ಇಂಥಹ ಸಂಗೀತ ದಿಗ್ಗಜರಿಗೆ ಬೆಂಡಿಗೇರಿಯವರು ಅತ್ಯಂತ ಪ್ರೀತಿಯ ಸಾಥೀದಾರರಾಗಿದ್ದರು. ಬಸವರಾಜರಲ್ಲಿರುವ ಲಯದ ಅಂದಾಜು ಕಲ್ಪನೆಗೂ ನಿಲುಕದ್ದು. ಯಾವದೇ ತಾಲದಲ್ಲಿ ಯಾವದೇ ಮಾತ್ರಾದಿಂದ ಲಡತ ಪ್ರಾರಂಭಿಸಿ ಸಮ್‌ಗೆ ಬರುವ ಚತುರತೆ ಕಲಾ ರಸಿಕರನ್ನು ದಿಗ್ಮೂಢಗೊಳಿಸುವಂತಿತ್ತು.

ಈಗ್ಗೆ ಸುಮಾರು ೨೫ ವರ್ಷಗಳ ಹಿಂದಿನ ಸಾಥಿಗೂ ಹಾಗೂ ಇಂದಿನ ಸಾಥಿಗೂ ಅಜಗಜಾಂತರ ವ್ಯತ್ಯಾಸ ಇರುವದು ಕಂಡುಬರುತ್ತದೆ. ಆ ಸಮಯದಲ್ಲಿ ಹಾಡುಗಾರರಿರಲಿ ಅಥವಾ ವಾದ್ಯಗಾರರಿರಲಿ ತಮ್ಮ ಕಲಾ ಪ್ರದರ್ಶನದಲ್ಲಿ ಲಡತ ಅಂಗವನ್ನು ತಪ್ಪದೇ ಪ್ರದರ್ಶಿಸುತ್ತಿದ್ದರು. ಆವಾಗ ಕೇಳಬೇಕು ಬೆಂಡಿಗೇರಿಯವರ ಸಾಥಿಯನ್ನು. ವಾದ್ಯಗಾರರ ಜೊತೆಗೆ ಅವರು ಯಾವದೇ ಮಾತ್ರಾದಿಂದ ಪ್ರಾರಂಭಿಸಿದ ಲಡತ ವಿವಿಧ ಲಯಗಳಲ್ಲಿ ತಿರುಗಿ ಮುಖಡಾದೊಂದಿಗೆ ಸಮ್ಮಿಗೆ ಬಂದು ಕೂಡಿಕೊಳ್ಳುವ ಅವರ ವೈಖರಿ ರಸಿಕರನ್ನು ಮೈ ಮರೆಸಿ ಬಿಡುತ್ತಿತ್ತು. ಆದರೆ ಇತ್ತೀಚಿನ ಸಾಥಿಯನ್ನು ನಾನು ಗಮನಿಸಿದ್ದೇನೆ, ವಾದ್ಯಗಾರರು ತಾವು ನುಡಿಸಿದ ಮೇಲೆ ಸಾಥಿದಾರರಿಗೆ ತಬಲಾ ನುಡಿಸಲು ಸಮಯವನ್ನು ಕೊಡುತ್ತಾರೆ. ಆಗ ಸಾಥಿದಾರರು ತಮ್ಮ ಕಲೆಯನ್ನು ಪ್ರದರ್ಶಿಸಬೇಕಾಗುತ್ತದೆ. ಆದರೆ ನಾನು ಮೊದಲು ಹೇಳಿದ ಸಾಥಿ ಪದ್ಧತಿಯು ಮುಖ್ಯ ಕಲಾವಿದನಿಗೂ ಹಾಗೂ ಸಾಥಿದಾರನಿಗೂ ಸತ್ವಪರೀಕ್ಷೆಯಾಗುತ್ತಿತ್ತು. ಇಂಥಹ ಸಾಥಿದಾರಿಕೆಯಲ್ಲಿ ಬೆಂಡಿಗೇರಿಯವರು ಸಿದ್ಧಹಸ್ತರಾಗಿದ್ದರು. ಇದರಂತೆ ಇವರ ಇನ್ನೊಂದು ವೈಶಿಷ್ಟ್ಯವೆಂದರೆ ಹಾಡುಗಾರರ ಸಾಮರ್ಥ್ಯಕ್ಕೆ ತಕ್ಕ ಸಾಥ ನೀಡಿ ಹಾಡುಗಾರರನ್ನು ಪ್ರೋತ್ಸಾಹಿಸುತ್ತಿದ್ದರು. ಇವರನ್ನು ತಮ್ಮ ಸಾಥಿದಾರರೆಂದು ತೆಗೆದುಕೊಳ್ಳಲು ಹಿಂದುಸ್ತಾನಿ ಸಂಗೀತದ ಮಹಾನ ವಿದ್ವಾಂಸರು ಎಷ್ಟು ಆಶೆಪಡುತ್ತಿದ್ದರೊ ಅದೇ ರೀತಿ ಸಂಗೀತ ಕ್ಷೇತ್ರದಲ್ಲಿ ಆದೇತಾನೆ ಅಂಬೆಗಾಲನ್ನಿಡುತ್ತಿದ್ದ ಯುವ ಸಂಗೀತಗಾರರೂ ಅಷ್ಟೇ ಆಶೆ ಪಡುತ್ತಿದ್ದರೆಂಬ ಸಂಗತಿ

ಆಶ್ಚರ್ಯಪಡುವಂತಹದಾಗಿದೆ.

ಪಂ. ಬೆಂಡಿಗೇರಿಯವರು ತಾವೊಬ್ಬ ಮಹಾನ ಕಲಾವಿದರಾಗಿಯೂ ಚಿಕ್ಕಮಕ್ಕಳ ಜೊತೆಗೆ ಸಾಥಿಮಾಡಲು ಎಂದೂ ಹಿಂದೂ ಮುಂದು ನೋಡತ್ತಿರಲಿಲ್ಲವೆಂಬ ಸಂಗತಿ ಅವರ ವಿಶಾಲ ಮನೋಭಾವಕ್ಕೆ ಸಾಕ್ಷಿಯಾಗಿದೆ. ಇವರ ಈ ಮನೋಭಾವ ಹಿಂದೂಸ್ತಾನಿ ಸಂಗೀತ ಕ್ಷೇತ್ರಕ್ಕೆ ಮಹಾನ ಕೊಡುಗೆಯಾಗಿದೆ ಎಂದು ಹೇಳಬಹುದು.

## ೧೪. ಶ್ರೀ ಹಮೀದ ಖಾನ (ಸಿತಾರ ವಾದಕರು) :

ಸಂದರ್ಶಕ : ಸರ, ಪಂಡಿತ ಬಸವರಾಜ ಬೆಂಡಿಗೇರಿಯವರು ತಮಗೆ ಸಿಕ್ಕಿದ್ದು, ಭೆಟ್ಟಿಯಾಗಿದ್ದು ಯಾವಾಗ?

ಹಮೀದ ಖಾನ : ನಾನು ಅವರ ಕಡೆ ಮೂರ ವರ್ಷ ತಬಲಾ ಕಲತೇನಿ. ನಾನು ಇಲ್ಲಿ ಪಿ.ಯು.ಸಿ.ಗ ಬಂದಾಗ ತಬಲಾ ಸಬಜೆಕ್ಟ ತೊಂಗಡಿದ್ದೆ. ಅವಾಗ ಅವರೆ ನನಗ ಕಲಿಸ್ತಿದ್ರು, ಇಲ್ಲೆ ಕಾಲೇಜನ್ಯಾಗ.

ಸಂದರ್ಶಕ : ತಬಲಾ ಕಲಸ್ತಿದ್ರು.

ಹಮೀದ ಖಾನ : ಹಾ, ಅವಾಗ ಭೇಟಿಯಾಗಿದ್ದ ಬ್ಹಾಳ ಒಳ್ಳೆ ಶಿಕ್ಷಕರವರ ಸ್ಟುಡೆಂಟ್ಸ ಟ್ಯಾಲೆಂಟ ಪ್ರಕಾರವರ ಕಲಸ್ತಿದ್ರು. ಅವರ ನೆನಪಿನ ಶಕ್ತಿ ಬ್ಹಾಳ ಛಲೊ ಇತ್ತವರದ. ಯಾರಗ ಯಾವಾಗ ಏನ ಕಲಿಸಿದ್ದ ಬ್ಹಾಳ ಛಲೊ ನೆನಪಿರ್‍ತಿತ್ತ. ಆಮೇಲೆ ಅವರ ಟ್ಯಾಲೆಂಟ ಪ್ರಕಾರ ಬ್ಯಾರೆ ಬ್ಯಾರೆ ಟೈಪ ಅವರ ಹೇಳ್ತಿದ್ರು. ಒಂದ ಕಾಯದಾ ಮೂರ ನಾಲ್ಕ ಜನ ಸ್ಟುಡೆಂಟ್ಸ ಕಲಿಸಿದ್ರು ಬ್ಯಾರೆ ಬ್ಯಾರೆ ಟೈಪ ಕಲಿಸ್ತಿದ್ರುವರ.

ಸಂದರ್ಶಕ : ಬ್ಯಾರೆ ಬ್ಯಾರೆ ಸ್ಟುಡೆಂಟ್ಸಿಗ ಬ್ಯಾರೆ ಬ್ಯಾರೆ

ಹಮೀದ ಖಾನ : ಬ್ಯಾರೆ ಬ್ಯಾರೆ ಟೈಪ ಕಲಿಸ್ತಿದ್ರು.

ಸಂದರ್ಶಕ : ಆಮೇಲೆ ಇವರ ವೈಶಿಷ್ಟ್ಯತೆ ಯಾವ ರೀತಿ ಇತ್ತು ತಬಲಾ ನುಡಿಸುವ ಪದ್ಧತಿ, ಸಾಥ ಮಾಡುದಾತು.

ಹಮೀದ ಖಾನ : ವೈಶಿಷ್ಟ್ಯತೆ ಅಂದರ ಸಾಥ ಮಾಡುದ ವಿಶೇಷ ಇತ್ತವರದ. ಗಾಯನ ಜೋಡಿ ಹಂಗ ಸಾಥ ಮಾಡಬೇಕ ಅದರ ಪ್ರಕಾರ ಮಾಡ್ತಿದ್ರು. ಅವರದು ವಿಶೇಷ ಅಂದ್ರ ತಂತು ವಾದ್ಯ ಜೋಡಿ ಅವರ ಬ್ಹಾಳ ಛಲೊ ಅಕಂಪನಿಮೆಂಟ ಮಾಡ್ತಿದ್ರು. ನಾ ಅವರು ಸಿತಾರ ಜೋಡಿ ಬಾರಿಸಿದ್ದ ಕೇಳೇನಿ, ಸರೋದ ಜೋಡಿ ಕೇಳೇನಿ. ಆಮೆಲೆ ವಾಯಲಿನ ಗಜಾನನ ಬುವಾ ಜೋಶಿ ಅವರ ಜೊತೆಗೆ ಕೇಳೇನಿ. ಗಜಾನನ ಬುವಾ ಜೋಶಿ ಅವರ ಜೊತೆ ಅಂಕಿ ಅವರದ ತಬಲಾ ಯಾವದ ವಾಯಲಿನ್ ಯಾವದಂತ ಗೊತ್ತಾಗಕಿಲ್ಲ ಅಷ್ಟ ಛಂದ ಬಾರಸ್ತಿದ್ರು.

ಸಂದರ್ಶಕ : ಅಷ್ಟ ಪರಫೆಕ್ಟ ಬಾರಸ್ತಿದ್ರು.

ಹಮೀದ ಅವರು : ಪರಫೆಕ್ಟ ಬಾರಸ್ತಿದ್ರ ಅದರಾಗ ಅವರ ಸ್ಪೆಷ್ಯಾಲಿಟಿ ಏನಂದ್ರ ಏನ ಬಾರಿಸಿದ್ರು ಪ್ರತಿಯೊಂದ ಮಾತ್ರಾ ಗುರುತಾಕ್ಕಿತ್ತ. ಮೇನ ಆರ್ಟಿಸ್ಟಿಗ ಸಮ್, ಹುಸಿ ಎಲ್ಲಾ ಕ್ಲೀನ್ ತೋರಸಕೊಂತ ಬಾರಸ್ತಿದ್ರುವರ. ಅದ ಅವರದ ವಿಶೇಷ ಇತ್ತ. ಜೊತೆಗೆ ಬಾರಸ್ತಿದ್ರ ಅದ ಹಳೆ ಪದ್ಧತಿ ಅದ ಸಾತ ಮಾಡುದು.

ಸಂದರ್ಶಕ : ಲಡತ ಬ್ಹಾಳ ಛಲೊ ಮಾಡ್ತಿದ್ರಂತಲ್ರಿ ಅವರು

ಹಮೀದ ಖಾನ : ಅಲ್ಲ, ಅದಽ ಹೇಳ್ಳಿಕತ್ತೀನಿ. ಜೊತೆಗೆ ಬಾರಸುದ ಅಂದ್ರ ಲಡತ ಬ್ಹಾಳ ಛಲೊ

ಇತ್ತ. ಅದ ವಿಶೇಷ ಇತ್ತವರದ. ಆಯಾ ಪ್ರಕಾರ ಯ್ಯಾ ಟೈಪ ನಮ್ಮ ತಾನ ಪಲ್ಟಾ ಇರ್ತಾವಲ್ಲ ಅದ ಟೈಪ ಬಾರಸ್ತಿದ್ರ. ಅವರ ಮೇನ ಆರ್ಟಿಸ್ಟ ಒಂದ ಬಾರಸುದ ಬ್ಯಾರೆ ಅವರೊಂದ ಬಾರಸುದ ಬ್ಯಾರೆ ಹಂಗ ಆಗ್ತಿದ್ದಿಲ್ಲ, ಅದ ಪದ್ಧತಿಯಲ್ಲೆ ಹೋಗುತ್ತಿತ್ತು. ನಡುವೆಲ್ಲಾ ಪೆಟ್ಟು, ಹುಸಿ ಕರೆಕ್ಟ ತೋರಸಕೊಂತ ಹೊಗ್ತಿದ್ರ. ಅದಽ ವಿಶೇಷ ಇತ್ತ.

ಸಂದರ್ಶಕ : ಆಮೇಲೆ ಸಂಗೀತ ಬಗ್ಗೆನೂ ಇವರಿಗ ಪರಿಚಯ ಇತ್ತ ಕಾಣತದ್ರಿ.

ಹಮೀದರವರು : ಎಲ್ಲಾ ರಾಗನು ಗೊತ್ತಿದ್ವು ಅವರಿಗ. ಆ ಮೇಲೆ ಬಂದಿಶೆಲ್ಲಾ ಬೈಪಟ ಇರ್ತಿದ್ವು ಅವರಿಗೆ ನಾ ಹೇಳಿದ್ನೆಲ್ಲಾ, ನೆನಪಿನ ಶಕ್ತಿ ಬಹಳ ಛಲೊ ಇತ್ತಂತ. ಕೆಲವೊಮ್ಮೆ ಮೇನ ಆರ್ಟಿಸ್ಟ ಮರತಿರ್ತಿದ್ರ ಹಾಡುವಾಗ ಇವರ ನೆನಪ ಮಾಡಿ ಕೊಡ್ತಿದ್ರ ಅವರಗ ಬಂದಿಶ. ಹಂಗೂ ಆಗೈತಿ ಅಂಥಾ ಪ್ರೊಗ್ರಾಮ ಅಂತ ಕೇಳೀನಿನಾನ. ಯಾರು ಆರ್ಟಿಸ್ಟ ಮರತಿದ್ದ ಮುಂದ ಹೇಳಿಕೊಟ್ರರವರ ಮನ್ಸೂರವರ ಮಾಡಿದ್ರ ಅವತ್ತ. ಬ್ಯಾರೆ ಬ್ಯಾರೆ ಘರಾಣಾ ಎಲ್ಲಾ ಘರಾಣಾದ ಬ್ಹಾಳ ಛಲೊ ಗೊರ್ತಿತ್ತವರಗ. ಅವರ ಗಾಯಕಿ ಹೆಂಗ ಅದ ಅವರದ ವಾದನ ಶೈಲಿ ಹೆಂಗದ ಅದ ಪ್ರಕಾರವಾಗಿ ಸಾಥ ಮಾಡ್ತಿದ್ರವರ. ಬ್ಹಾಳ ಇಂಪ್ರೆಸ್ಸಿವ್‌ವಾಗಿ ಸಾಥ ಮಾಡ್ತಿದ್ರ.

## ೧೫. ಪಂ. ಸಂಗಮೇಶ್ವರ ಗುರುವ (ಗಾಯಕರು)

ಸಂದರ್ಶಕ : ಗುರುಜಿಯವರ, ಪಂ ಬಸವರಾಜ ಬೆಂಡಿಗೇರಿಯವರು ತಮಗ ಯಾವಾಗ ಪರಿಚಯಾಗಿದ್ದು?

ಸಂಗಮೇಶ್ವರ : ನನಕಿಂತ ಮೂರು ವರ್ಷ ಮೊದಲ ಹುಟ್ಟಿದ್ದಾ

ಸಂದರ್ಶಕ : ಮೊದಲ ರಿ

ಸಂಗಮೇಶ್ವರ : ಮೊದಲ

ಸಂದರ್ಶಕ : ಮೊದಲ ಹುಟ್ಯಾರ ಅಂದರ ನಿವುಂಗ ಪರಿಚಯ ಆಗಿದ್ದ ಯಾವಾಗ?

ಸಂಗಮೇಶ್ವರ : ಬಹಳ ವರ್ಷ ಆತಪ್ಪ

ಸಂದರ್ಶಕ : ಅಂದರ ಏನಲ್ಲಂದ್ರು ಒಂದ

ಸಂಗಮೇಶ್ವರ : ೧೫-೨೦ ವರ್ಷ ಆತ ಅದರಕಿಂತನೂ ಹೆಚ್ಚ ಆಗಿರಬೇಕ

ಸಂದರ್ಶಕ : ತಮ್ಮ ಕಡೆ ಯಾವಾಗ ಅವರ ತಬಲಾ ನುಡಿಸಿದ್ದು ಸಾಥ ಮಾಡಿದ್ದು

ಸಂಗಮೇಶ್ವರ : ಅವರ ರಗಡ ಮಾಡ್ಯಾರ

ಸಂದರ್ಶಕ : ರಗಡ ಮಾಡ್ಯಾರ ?

ಸಂಗಮೇಶ್ವರ : ರಗಡ

ಸಂದರ್ಶಕ : ಯಾದರೊಂದು ಹಿಂಗ ತಮಗ ನೆನಪಿದ್ದಿದ್ದು

ಸಂಗಮೇಶ್ವರ : ಇಗ ನಿನಗೆ ಯಾವದಂತ ಯೇಳಲಿ ಅದ ಪಂಚೇತಿ ಬಂದದ ನನಗ ಎಲ್ಲಾ ಕಡೆ ಸಾಕಷ್ಟ ಮಾಡ್ಯಾರ

ಸಂದರ್ಶಕ : ಲಯದ ಹಿಡಿತ ಇವರ್ದ ಹ್ಯಾಂಗಿತ್ರಿ?

ಸಂಗಮೇಶ್ವರ : ಲಯದ ಹಿಡಿತ ಅಂದ್ರ ಅವರ ಗುರಗೊಳೆನಿದ್ರಲ್ಲಾ ಮೆಹಬೂಬ ಖಾನ ಸಾಹೇಬ್ರು ಅವರು ಕರೆಕ್ಟ ಕೊಟ್ಟಿದ್ರು

ಸಂದರ್ಶಕ : ಬಹಳ ಒಳ್ಳೆ ಸಾಥ ಮಾಡ್ತಿದ್ರು ತುಂತುವಾದ್ಯ ಕಡೇನು ಆಯ್ತು ಗಾಯನ ಕಡೇನು ಆತು

ಸಂಗಮೇಶ್ವರ : ಹೌದ

ಸಂದರ್ಶಕ : ಲಡತ ಗಿಡತ ಬ್ಹಾಳ ಛಲೊ ಮಾಡ್ತಿದ್ರೆನ್ರಿ?

ಸಂಗಮೇಶ್ವರ : ಲಡತ ಬೆಸ್ಟ

ಸಂದರ್ಶಕ : ಬ್ಹಾಳ ಛಲೊ ಮಾಡ್ತಿದ್ರ

| | | |
|---|---|---|
| ಸಂಗಮೇಶ್ವರ | : | ಯಾಕಂದ್ರ ಲಡತಂದ್ರ ಅವರ್ದ ಲಯದ್ದ ಇದ ಇರ್ತದಲ್ಲಾ ತಲ್ಯಾಗ |
| ಸಂದರ್ಶಕ | : | ಅದ ಬ್ಹಾಳ ಛಲೊ ಇತ್ತು |
| ಸಂಗಮೇಶ್ವರ | : | ಹೌದ ಹೌದ |
| ಸಂದರ್ಶಕ | : | ಸೋಲೊ ಗಿಲೊ ಹೆಂಗ ನುಡಿಸ್ತಿದ್ರಿವರ ತಬಲಾದಾಗ |
| ಸಂಗಮೇಶ್ವರ | : | ಸೋಲೊ ಬೆಸ್ಟ-ಬೆಸ್ಟ |
| ಸಂದರ್ಶಕ | : | ಎಲ್ಲಾ ಪಾರಂಪರಿಕ |
| ಸಂಗಮೇಶ್ವರ | : | ಹೌದ ಹೌದ ಎಲ್ಲಾ ಪಾರಂಪರಿಕಽನ |
| ಸಂದರ್ಶಕ | : | ಎಲ್ಲಾ |
| ಸಂಗಮೇಶ್ವರ | : | ಹೌದ ಹೌದ |
| ಸಂದರ್ಶಕ | : | ಪುಣಾ, ಬಾಂಬೆ |
| ಸಂಗಮೇಶ್ವರ | : | ಕೊಟ್ಟಾರ |
| ಸಂದರ್ಶಕ | : | ಕಾರ್ಯಕ್ರಮ ಕೊಟ್ಟಾರ ನಂದಿಕೇಶ್ವರ ಸರೂ ಅವರ್ಕಡೇನ ಕಲ್ತಾರೆನ್ರಿ ತಬಲಾನ? |
| ಸಂಗಮೇಶ್ವರ | : | ಹಾ, ನಂದಿಕೇಶ್ವರನು ಇವರ ಕಡೇನ |
| ಸಂದರ್ಶಕ | : | ಕಲಿತಾರ |
| ಸಂಗಮೇಶ್ವರ | : | ಹೌದ |
| ಸಂದರ್ಶಕ | : | ಇವರು ಬೆಳಗಾಂವನ್ಯಾಗ ತಮ್ಕಡೆ ಹತ್ತವರ್ಷ ಇದ್ರ ಕಾಣ್ತದ್ರಿ? |
| ಸಂಗಮೇಶ್ವರ | : | ಹತ್ತವರ್ಷ ಇದ್ರಿ |
| ಸಂದರ್ಶಕ | : | ಹೌದ, ಆಮೇಲೆ ಮುಂದೆಲ್ಲಾ ನಿಮುಗ ಗಂಡಾ ಹೆಂಡತಿನ ಅಂತಿದ್ರ? |
| ಸಂಗಮೇಶ್ವರ | : | ಹಾ, ಗಂಡ ಹೆಂಡತಿನ ಅಂತಿದ್ರ ಹೌದ ಹೌದ ಹೌದ ಯಾವತ್ತೂ ಇಬ್ಬರೂ ಜೋಡಿನ ಹೌದ. |
| | : | ಬೆಂಡಿಗೇರಿಯವರಷ್ಟ ನೆನಪಿನ ಶಕ್ತಿ ನನಗೇನು ಅನ್ನೊದಿಲ್ಲಪ್ಪಾ ಈಗ, ಸಾಧಾರಣ ಮಂದಿಗೆ ಐತಂತ |
| ಸಂದರ್ಶಕ | : | ಮತ್ತ ರಾಗ-ರಾಗಿಣಿಗಳ ಬಗ್ಗೆ |
| ಸಂಗಮೇಶ್ವರ | : | ರಾಗ-ರಾಗಿಣಿಗಳ ಬಗ್ಗೆನೂ ಇತ್ತೌಗ |
| ಸಂದರ್ಶಕ | : | ಬ್ಹಾಳಿತ್ತೇನ್ರಿ |

| | | |
|---|---|---|
| | : | ಹೌದ ಹೌದ ರಾಗ-ರಾಗಿಣಿ ಪ್ರತಿಯೊಂದು ಬಸವಣ್ಣಪ್ಪಾ ಇದ ಇದ್ದೆಂಗ ನಿಮಗ ಬರತೈತಿ ಅಂತ "ನನಗ ಅಲ್ಲಿ ಕೇಳೇ ಬಂದ ಹೇಳ್ರಿ" ಅಂತ ಅತಾನವ ಅದ ಕೇಳಿದ್ದ ಎಲ್ಲಾ ಅವನ ತಲ್ಯಾಗ |
| ಸಂಗಮೇಶ್ವರ | : | ಚೀಜುಗಳು ನೆನಪಿದ್ವು ಕೆಲವು |
| ಸಂದರ್ಶಕ | : | ಹೌದ್ರಿ |
| ಸಂಗಮೇಶ್ವರ | : | ಹೌದು |
| ಸಂದರ್ಶಕ | : | ಅಷ್ಟ ಒಳ್ಳೆ ಜ್ಞಾನ ಅವರಿಗಿತ್ರಿ? |
| ಸಂಗಮೇಶ್ವರ | : | ಹೌದ |
| ಸಂದರ್ಶಕ | : | ಬೆಂಡಿಗೇರಿಯವರಗೂಡ ನಿಮಗೆ ಅಭ್ಯಾಸ ಯಾವ ರೀತಿ ಆಗ್ತಿತ್ತು? |
| ಸಂಗಮೇಶ್ವರ | : | ರೇಕಾ ಹಿಡಿಬೇಕು ದಿನಾ ಹಾಡಬೇಕು |
| ಸಂಗಮೇಶ್ವರ ಅವರ ಪತ್ನಿ | : | ಹತ್ತ ವರ್ಷ ಹಿಂಗ ರಿಯಾಜ ಮಾಡ್ಯಾರಿವ್ರ ಅಯ್ಯಾಽ ಹೊರಗಽ ಬೀಳ್ತಿದ್ದಿಲ್ರಿವರು. |
| ಸಂದರ್ಶಕ | : | ಇಬ್ಬರೂ ಕೂಡೇ? |
| ಸಂಗಮೇಶ್ವರ ಅವರ ಪತ್ನಿ | : | ಇಬ್ಬರೂ ಕೂಡೆ ಜೊತೀನ |
| ಸಂದರ್ಶಕ | : | ಇಬ್ಬರೂ ಜೊತೆ ಕೂಡೆ ಅಭ್ಯಾಸ ಮಾಡ್ಯಾರ |
| ಸಂಗಮೇಶ್ವರ ಅವರ ಪತ್ನಿ | : | ಇಷ್ಟ ಹತ್ತವರ್ಷಿದ್ರು ಮಂದಿ ಗಂಡಾ ಹೆಂಡ್ತಿ ಅಂತಿದ್ರು ಇಷ್ಟ ನೆನಪಾತ ನೋಡು |
| ಸಂದರ್ಶಕ | : | ಎಲ್ಲಾ ಘರಾಣೆಗೂ ಆ ಶೈಲಿ ಪ್ರಕಾರ ಬಾರಸ್ತಿದ್ರ ಕಾಣ್ತದ್ರಿ, ಕಿರಾಣಾ ಘರಾಣಾ ಕಡೆ ಕಿರಾಣಾ ಘರಾಣಾ ಗತೆ, ಅತ್ರೋಲಿ ಘರಾಣೆ ಕಡೆ ಅವರ ಕಡೆ ಅದೇ ರೀತಿನ ನುಡಸ್ತಿದ್ರಕಾಣ್ತದ |
| ಸಂಗಮೇಶ್ವರ | : | ಹೌದ |
| ಸಂಗಮೇಶ್ವರ ಅವರ ಪತ್ನಿ | : | ಮತ್ತ ಎಲ್ಲಾ ಕಡೇನು ಅವನು ತೊಗೊತಿದ್ರೇನೋ? |
| ಸಂಗಮೇಶ್ವರ | : | ಹೌದ ಎಲ್ಲಾಕಡೆ ನೋಡ |
| ಸಂದರ್ಶಕ | : | ಬೆಂಡಿಗೇರಿಯವರು ಇವರ ಮನ್ಯಾಗಿದ್ರಂತಲ್ರಿ ಸ್ವಲ್ಪದಿನಾ ಮೆಹಬೂಬಖಾನ ಸಾಹೇಬ ಮಿರಜಕರರವರ ಮನ್ಯಾಗ |
| ಸಂಗಮೇಶ್ವರ | : | ಹೌದ |
| ಸಂದರ್ಶಕ | : | ಇದ್ದ ಕಲತ್ರೇನ್ರಿ? |

ಸಂಗಮೇಶ್ವರ : ಇದ್ದ ಇದ್ದ.

ಸಂದರ್ಶಕ : ಆದರ ಬ್ಹಾಳ ನೆನಪಿನ ಶಕ್ತಿ ಬ್ಹಾಳ ಇತ್ತಂತ್ರಿ ಬೆಂಡಿಗೇರಿಯವರಿಗೆ

ಸಂಗಮೇಶ್ವರ : ಹೌದ ಹೌದ.

ಅಧ್ಯಾಯ - ೧೦

# ಪಂಡಿತ ಬಸವರಾಜ ಬೆಂಡಿಗೇರಿಯವರ ತಬಲಾ ರಚನೆಗಳು

# ಅಧ್ಯಾಯ-೧೦

## ಪಂಡಿತ ಬಸವರಾಜ ಬೆಂಡಿಗೇರಿಯವರ ತಬಲಾ ರಚನೆಗಳು

ಪಂಡಿತ ಬಸವರಾಜ ಬೆಂಡಿಗೇರಿಯವರು ತಬಲಾ ವಾದನ ಕಲೆಯಲ್ಲಿ ನೈಪುಣ್ಯತೆ ಸಾಧಿಸಿ ಗುರುಮುಖಾಂತರ ಕಲಿತ ಪಾರಂಪರಿಕ ಹಾಗೂ ತಮ್ಮ ದೇ ಆದ ಅಸಂಖ್ಯ ತಬಲಾ ರಚನೆಗಳನ್ನು ಅಂದರೆ ಪೇಶಕಾರ ,ಕಾಯದಾ, ರೇಲಾ, ಗತ್, ಗತ್ ತುಕಡಾ, ಚಕ್ರದಾರ ಮುಂತಾದವುಗಳನ್ನು ಬೇರೆ ಬೇರೆ ತಾಲಗಳಲ್ಲಿ ಅಂದರೆ ತೀನತಾಲ್, ಝಪತಾಲ್, ರೂಪಕ, ಎಕತಾಲ ಮುಂತಾದವುಗಳಲ್ಲಿ ರಚಿಸಿದರು. ಉದಾಹರಣೆಗಾಗಿ ತೀನತಾಲದಲ್ಲಿರುವ ಪೇಶಕಾರ, ಕಾಯದಾ, ರೇಲಾ, ಗತ್, ಗತ್ ತುಕಡಾ, ಚಕ್ರದಾರ ಇವುಗಳನ್ನು ಬೇರೆ ಬೇರೆ ತಾಲಗಳ ವಿಭಾಗ ಹಾಗೂ ಮಾತ್ರಾಗಳಿಗೆ ಅಳವಡಿಸಿ ಸರಿಯಾಗಿ ಹೊಂದುವಂತೆ ತಬಲಾ ಬೋಲಿನ ರಚನೆಗಳನ್ನು ಮಾಡಿದ್ದಾರೆ. ಇವೆಲ್ಲವುಗಳನ್ನು ಈ ಮುಂದೆ ವಿಶದವಾಗಿ ಪ್ರಸ್ತುತ ಪಡಿಸಲಾಗಿದೆ.

### ತಾಲ : ತೀನತಾಲ

ಮಾತ್ರಾ -೧೬, ಪೆಟ್ಟು ೧,೫,೧೩ಕ್ಕೆ ಹುಸಿ- ೯ಕ್ಕೆ

| | | | |
|---|---|---|---|
| ೧ ೨ ೩ ೪ | | ೫ ೬ ೭ ೮ | |
| ಧಾ ಧಿನ್ ಧಿನ್ ಧಾ | । | ಧಾ ಧಿನ್ ಧಿನ್ ಧಾ | । |
| X | | ೨ | |
| ೯ ೧೦ ೧೧ ೧೨ | | ೧೩ ೧೪ ೧೫ ೧೬ | |
| ಧಾ ತಿನ್ ತಿನ್ ತಾ | । | ತಾ ಧಿನ್ ಧಿನ್ ಧಾ | ॥ |
| 0 | | ೩ | |

**ಪೇಶಕಾರ :**

೧.

| | | | | |
|---|---|---|---|---|
| ಧಿಽಕ್ಡ ಧಿಂಧಾ (X) | ಽಧಾಧಿಂಧಾ | ಧಾತಿಧಾತಿ | ಧಾಧಾಧಿಂಧಾ | । |
| ತಕಗಿಡಾಽನಧಾಽ (೨) | ತಿತ್ ಧಾಧಿಂಧಾ | ಧಾತಿಧಾತಿ | ಧಾಧಾತಿಂತಾ | । |
| ತಿಽಕ್ಡ ತಿಂತಾ (0) | ಽತಾಂತಿಂತಾ | ತಾತಿತಾತಿ | ತಾತಾತಿಂತಾ | । |
| ತಕಗಿಡಾಽನಧಾಽ (೩) | ತಿತ್ ಧಾಧಿಂಧಾ | ಧಾತಿಧಾತಿ | ಧಾಧಾಧಿಂಧಾ | ॥ |

೨.

| | | | | |
|---|---|---|---|---|
| ಧಿಽಕ್ಡ ಧಿಂಧಾ (X) | ಽದಾಧಿಂಧಾ | ಧಿಽಕ್ಡ ಧಿಂಧಾ | ಽಧಾಧಿಂಧಾ | । |
| ಧಿಽಕ್ಡ ಧಿಂಧಾ (೨) | ಽಧಾಧಿಂಧಾ | ಧಾತಿಧಾತಿ | ಧಾಧಾತಿಂತಾ | । |
| ತಿಽಕ್ಡ ತಿಂತಾ (0) | ಽತಾಂತಿತಾ | ತಿಽಕ್ಡ ತಿಂತಾ | ಽತಾಂತಿತಾ | । |
| ಧಿಽಕ್ಡ ಧಿಂಧಾ (೩) | ಽಧಾಧಿಂಧಾ | ಧಾತಿಧಾತಿ | ಧಾಧಾಧಿಂಧಾ | ॥ |

೩.

| | | | | |
|---|---|---|---|---|
| ಧಿಽಕ್ಡ ಧಿಂಧಾ (X) | ಧಿಽಕ್ಡ ಧಿಂಧಾ | ಧಿಽಕ್ಡ ಧಿಂಧಾ | ಽಧಾಧಿಂಧಾ | । |
| ಧಿಽಕ್ಡ ಧಿಂಧಾ (೨) | ಽಧಾಧಿಂಧಾ | ಧಾತಿಧಾತಿ | ಧಾಧಾತಿಂತಾ | । |
| ತಿಽಕ್ಡ ತಿಂತಾ (0) | ತಿಽಕ್ಡ ತಿಂತಾ | ತಿಽಕ್ಡ ತಿಂತಾ | ಽತಾತಿಂತಾ | । |
| ಧಿಽಕ್ಡ ಧಿಂಧಾ (೩) | ಽಧಾಧಿಂಧಾ | ಧಾತಿಧಾತಿ | ಧಾಧಾಧಿಂಧಾ | ॥ |

| | | | | | |
|---|---|---|---|---|---|
| ೪. | ಧಿSಕ್ಡ ಧಿಂಧಾ | Sಧಾಧಿಂಧಾ | Sಧಾಧಿಂಧಾ | Sಧಾಧಿಂಧಾ | । |
| | x | | | | |
| | ಧಿSಕ್ಡ ಧಿಂಧಾ | Sಧಾಧಿಂಧಾ | ಧಾತಿಧಾತಿ | ಧಾಧಾತಿಂತಾ | । |
| | ೨ | | | | |
| | ತಿSಕ್ಡ ತಿಂತಾ | Sತಾಂತಿತಾ | Sತಾತಿಂತಾ | Sತಾತಿಂತಾ | । |
| | 0 | | | | |
| | ಧಿSಕ್ಡ ಧಿಂಧಾ | Sಧಾಧಿಂಧಾ | ಧಾತಿಧಾತಿ | ಧಾಧಾಧಿಂಧಾ | ॥ |
| | ೩ | | | | |
| ೫. | ಧಿSಕ್ಡ ಧಿಂಧಾ | Sಧಾಧಿಂಧಾ | ಧಾಧಾಧಿಂಧಾ | ಧಾಧಾಧಿಂಧಾ | । |
| | x | | | | |
| | ಧಿSಕ್ಡ ಧಿಂಧಾ | Sಧಾಧಿಂಧಾ | ಧಾತಿಧಾತಿ | ಧಾಧಾತಿಂತಾ | । |
| | ೨ | | | | |
| | ತಿSಕ್ಡ ತಿಂತಾ | Sತಾತಿಂತಾ | ತಾತಾತಿಂತಾ | ತಾತಾತಿಂತಾ | । |
| | 0 | | | | |
| | ಧಿSಕ್ಡ ಧಿಂಧಾ | Sಧಾಧಿಂಧಾ | ಧಾತಿಧಾತಿ | ಧಾಧಾಧಿಂಧಾ | ॥ |
| | ೩ | | | | |
| ೬. | ಧಾಧಾಧಿಂಧಾ | ಧಾಧಾಧಿಂಧಾ | ಧಾಧಾಂಧಿಧಾ | ಧಾಧಾಧಿಂಧಾ | । |
| | x | | | | |
| | ಧಿSಕ್ಡ ಧಿಂಧಾ | ಧಾಧಿಂಧಾ | ಧಾತಿಧಾತಿ | ಧಾಧಾತಿಂತಾ | । |
| | ೨ | | | | |
| | ತಾತಾತಿಂತಾ | ತಾತಾತಿಂತಾ | ತಾತಾತಿಂತಾ | ತಾತಾತಿಂತಾ | । |
| | 0 | | | | |
| | ಧಿSಕ್ಡ ಧಿಂಧಾ | Sಧಾಧಿಂಧಾ | ಧಾತಿಧಾತಿ | ಧಾಧಾಧಿಂಧಾ | ॥ |
| | ೩ | | | | |
| ೭. | ಧಾತಿಧಾತಿ | ಧಾಧಾಧಿಂಧಾ | ಧಾತಿಧಾತಿ | ಧಾಧಾಧಿಂಧಾ | । |
| | x | | | | |
| | ತಕಗಿಡಾSನಧಾS | ತಿತ್ ಧಾಧಿಂಧಾ | ಧಾತಿಧಾತಿ | ಧಾಧಾತಿಂತಾ | । |
| | ೨ | | | | |
| | ತಾತಿತಾತಿ | ತಾತಾತಿಂತಾ | ತಾತಿತಾತಿ | ತಾತಾತಿಂತಾ | । |
| | 0 | | | | |
| | ತಕಗಿಡಾSನಧಾS | ತಿತ್ ಧಾಧಿಂಧಾ | ಧಾತಿಧಾತಿ | ಧಾಧಾಧಿಂಧಾ | ॥ |
| | ೩ | | | | |
| ೮. | ಧಾತಿಧಾತಿ | ಧಾಧಾಧಿಂಧಾ | ಧಾತಿSದಾತಿSಧಾತಿ | ಧಾಧಾಧಿಂಧಾ | । |
| | x | | | | |
| | ತಕಗಿಡಾSನಧಾS | ತಿತ್ ಧಾಧಿಂಧಾ | ಧಾತಿಧಾತಿ | ಧಾಧಾತಿಂತಾ | । |
| | ೨ | | | | |

| | | | | | |
|---|---|---|---|---|---|
| | ತಾತಿತಾತಿ | ತಾತಾತಿಂತಾ | ತಾತಿSತಾತಿSತಾತಿ | ತಾತಾತಿಂತಾ | । |
| | ೦ | | | | |
| | ತಕಗಿಡಾSನಧಾS | ತಿತ್‌ಧಾಧಿಂಧಾ | ಧಾತಿಧಾತಿ | ಧಾಧಾಧಿಂಧಾ | ॥ |
| | ೩ | | | | |
| ೯. | ಧಾತಿSಧಾತಿSಧಾತಿ | ಧಾಧಾಧಿಂಧಾ | ಧಾತಿSಧಾತಿSಧಾತಿ | ಧಾಧಾಧಿಂಧಾ | । |
| | X | | | | |
| | ತಕಗಿಡಾSನಧಾS | ತಿತ್‌ಧಾಧಿಂಧಾ | ಧಾತಿಧಾತಿ | ಧಾಧಾತಿಂತಾ | । |
| | ೨ | | | | |
| | ತಾತಿSತಾತಿSತಾತಿ | ತಾತಾತಿಂತಾ | ತಾತಿSತಾತಿSತಾತಿ | ತಾತಾತಿಂತಾ | । |
| | ೦ | | | | |
| | ತಕಗಿಡಾSನಧಾS | ತಿತ್‌ಧಾಧಿಂಧಾ | ಧಾತಿಧಾತಿ | ಧಾಧಾಧಿಂಧಾ | ॥ |
| | ೩ | | | | |
| ೧೦. | ಧಾತಿSಧಾತಿSಧಾತಿ | ಧಾಧಾಧಿಂಧಾ | ಧಾತಿಧಾತಿಧಾತಿಧಾತಿ | ಧಾಧಾಧಿಂಧಾ | । |
| | X | | | | |
| | ತಕಗಿಡಾSನಧಾS | ತಿತ್‌ಧಾಧಿಂಧಾ | ಧಾತಿಧಾತಿ | ಧಾಧಾಧಿಂಧಾ | । |
| | ೨ | | | | |
| | ತಾತಿSತಾತಿSತಾತಿ | ತಾತಾತಿಂತಾ | ತಾತಿತಾತಿತಾತಿತಾತಿ | ತಾತಾತಿಂತಾ | । |
| | ೦ | | | | |
| | ತಕಗಿಡಾSನಧಾS | ತಿತ್‌ಧಾಧಿಂಧಾ | ಧಾತಿಧಾತಿ | ಧಾಧಾಧಿಂಧಾ | ॥ |
| | ೩ | | | | |
| ೧೧. | ಧಾತಿಧಾತಿಧಾತಿಧಾತಿ | ಧಾಧಾಧಿಂಧಾ | ಧಾತಿಧಾತಿಧಾತಿಧಾತಿ | ಧಾಧಾಧಿಂಧಾ | । |
| | X | | | | |
| | ತಕಗಿಡಾSನಧಾS | ತಿತ್‌ಧಾಧಿಂಧಾ | ಧಾತಿಧಾತಿ | ಧಾಧಾತಿಂತಾ | । |
| | ೨ | | | | |
| | ತಾತಿತಾತಿತಾತಿತಾತಿ | ತಾತಾತಿಂತಾ | ತಾತಿತಾತಿತಾತಿತಾತಿ | ತಾತಾತಿಂತಾ | । |
| | ೦ | | | | |
| | ತಕಗಿಡಾSನಧಾS | ತಿತ್‌ಧಾಧಿಂಧಾ | ಧಾತಿಧಾತಿ | ಧಾಧಾಧಿಂಧಾ | ॥ |
| | ೩ | | | | |

## ತಿಹಾಯಿ

| | | | | |
|---|---|---|---|---|
| ತಕಗಿಡಾSನಧಾS | ತಿತ್‌ಧಾಧಿಂಧಾ | ಧಾತಿಧಾತಿ | ಧಾಧಾಧಿಂಧಾ | । |
| X | | | | |
| ಧಿSಕ್ಡ ಧಿಂಧಾ | Sಧಾಧಿಂಧಾ | ಧಾತಿಧಾತಿ | ಧಾಧಾತಿಂತಾ | । |
| ೨ | | | | |
| ಕಿಡನಗತಿSನಾS | ಕಿಡನಗತಿಂಗತಿನಾ | ಕೆನಾತಾಕೆತಿರಕಿಟ | ತಾಕತ್ರಕತಿನಾಕೆನಾ | । |
| ೦ | | | | |
| ತಕಗಿಡಾSನಧಾS | ತಿSನಾSಗಿಡಾSನ | ಧಾSತಿSನಾSಗಿಡಾ | ನಧಾSತಿSನಾS | ॥ ಧಾ X |
| ೩ | | | | |

